## ಕರ್ನಾಟಕ ಸರ್ಕಾರ-ನಿರ್ದಿಷ್ಟ ಯೋಜನೆ ನಿಗದಿತ ಸಾಧನೆ

ಪ್ರಸಕ್ತ ಸರ್ಕಾರ ಕರ್ನಾಟಕದ ಆಡಳಿತ ಸೂತ್ರ ವಹಿಸಿಕೊಂಡ ನಂತರ ರಾಜ್ಯದಲ್ಲಿ ಬದಲಾವಣೆಯ ಗಾಳಿ ಬೀಸುತ್ತಿದೆ. ಆಡಳಿತದಲ್ಲಿ ಕಾಲಬದ್ಧತೆಗೆ ಒತ್ತುಕೊಟ್ಟು ದಕ್ಷತೆಯನ್ನು ಹೆಚ್ಚಿಸಿ ಪಾರದರ್ಶಕತೆ ಮೂಡಿಸಲು ಪ್ರಾಮಾಣಿಕವಾಗಿ ಪ್ರಯತ್ನಿಸುತ್ತಿದೆ.

ಅಭಿವೃದ್ಧಿ ಯೋಜನೆಗಳನ್ನು ತೀವ್ರವಾಗಿ ಕಾರ್ಯಗತಗೊಳಿಸುವ ದಿಸೆಯಲ್ಲಿ ಅಗತ್ಯ ಸಂಪನ್ಮೂಲ ಕ್ರೋಢೀಕರಿಸಲು ಸರ್ಕಾರದ ಸತತ ಪ್ರಯತ್ನ. ಆದ್ದರಿಂದಲೇ ವಿದ್ಯುಚ್ಛಕ್ತಿ, ಕುಡಿಯುವ ನೀರು, ಸಾರಿಗೆ ದರಗಳನ್ನು ಹೆಚ್ಚಿಸುವ ಕಠಿಣ ನಿರ್ಧಾರ ತೆಗೆದುಕೊಳ್ಳಬೇಕಾದ ಅನಿವಾರ್ಯತೆ.

ದಶಕಗಳಿಂದಲೂ ನಿಧಾನಗತಿಯಲ್ಲಿ ಸಾಗುತ್ತಿದ್ದ ರಾಜ್ಯದ ಪ್ರತಿಷ್ಠಿತ "ಕೃಷ್ಣಾ ಮೇಲ್ದಂಡೆ ಯೋಜನೆಗೆ" ಕಳೆದ 2 ವರ್ಷಗಳಲ್ಲಿ ತೀವ್ರ ಚಾಲನೆ. ಆದಕ್ಕಾಗಿ "ಕೃಷ್ಣಾ ಭಾಗ್ಯ ಜಲ ನಿಗಮದ" ಉದಯ.

ಕೃಷಿಗೆ ಹಿಂದೆಂದಿಗಿಂತಲೂ ಹೆಚ್ಚಿನ ಉತ್ತೇಜನ ದೊರಕಿಸಿ ಆ ಮೂಲಕ 1996-97 ನೇ ಸಾಲಿನಲ್ಲಿ 91.70 ಲಕ್ಷ ಟನ್ ಆಹಾರಧಾನ್ಯಗಳ ದಾಖಲೆ ಉತ್ಪಾದನೆ.

ಆದ್ಯತಾ ವಲಯಗಳಾದ ವಸತಿ, ಶಿಕ್ಷಣ, ಆರೋಗ್ಯ, ಕುಡಿಯುವ ನೀರು ಸಮಾಜ ಕಲ್ಯಾಣ ಕ್ಷೇತ್ರಗಳಿಗೆ ಹೆಚ್ಚಿನ ಒತ್ತು. ಖಾಸಗಿ ವಲಯಗಳ ಸಹಯೋಗದೊಂದಿಗೆ ವಿದ್ಯುಚ್ಛಕ್ತಿ ಉತ್ಪಾದನೆಗೆ ಕ್ರಮ. 4 ನೇ ರಾಷ್ಟ್ರೀಯ ಕ್ರೀಡೆಗಳನ್ನು ಏರ್ಪಡಿಸಲು ಬೇಕಾಗಿದ್ದ ರೂ. 100 ಕೋಟಿ ಮೌಲ್ಯದ ಅಗತ್ಯ ಪರಿಕರಗಳನ್ನು ಅತ್ಯಲ್ಪ ಅವಧಿಯಲ್ಲೇ ಪೂರೈಕೆ.

ಮಾನ್ಯ ಮುಖ್ಯಮಂತ್ರಿ ಶ್ರೀ ಜೆ. ಹೆಚ್. ಪಟೇಲ್ ಅವರ ನೇತೃತ್ವದ ಪ್ರಗತಿಶೀಲ ಸರ್ಕಾರದ ಸಾಧನೆಯ ಒಳನೋಟ.

**ಯೋಜನಾ ವೆಚ್ಚ :-** 1996-97 ನೇ ಸಾಲಿನಲ್ಲಿ ಪ್ರಮುಖ ವಲಯಗಳ ಯೋಜನಾ ವೆಚ್ಚದಲ್ಲಿ ಹೆಚ್ಚಳ. 1997-98 ರಲ್ಲಿ ಒದಗಿಸಿರುವ ಮೊತ್ತ ರೂ. 4545 ಕೋಟಿ ಇದುವರೆಗಿನ ದಾಖಲೆ.

**ನೀರಾವರಿ :-** 1996-97 ನೇ ಸಾಲಿನ ಒಂದು ವರ್ಷದ ಅವಧಿಯಲ್ಲೇ ನೀರಾವರಿಗಾಗಿ ರೂ. 1381.45 ಕೋಟಿ ಖರ್ಚು. ಇದೂ ಒಂದು ದಾಖಲೆಯೆ! ಈ ಮೊತ್ತ 1992-93 ಮತ್ತು 1993-94 ನೇ ಸಾಲಿನ 2 ವರ್ಷಗಳಲ್ಲಿ ನೀರಾವರಿಗಾಗಿ ಮಾಡಲಾದ ವೆಚ್ಚ ರೂ. 1231.92 ಕೋಟಿಗಿಂತಲೂ ಸುಮಾರು 150 ಕೋಟಿ ಹೆಚ್ಚು. 1997-98 ರಲ್ಲಿ ನೀರಾವರಿ ಅಭಿವೃದ್ಧಿಗಾಗಿ ರೂ. 1517.96 ಕೋಟಿ.

**ಕೃಷ್ಣ ಮೇಲ್ದಂಡೆ ಯೋಜನೆ :-** 2000 ನೇ ಇಸವಿಯ ವೇಳೆಗೆ ಸಂಪೂರ್ಣಗೊಳ್ಳಲಿದ್ದು, ಇದರಿಂದ 6.22 ಲಕ್ಷ ಹೆಕ್ಟೇರ್ ಹೆಚ್ಚುವರಿ ಜಮೀನು ಹಸಿರಿನಿಂದ ಕಂಗೊಳಿಸುವ ಸೌಭಾಗ್ಯ.

**ವಿದ್ಯಾಭ್ಯಾಸ :-** 1996-97 ರಲ್ಲೇ 18650 ಪ್ರಾಥಮಿಕ ಶಿಕ್ಷಕರ ಹಾಗೂ 2500 ಪ್ರೌಢಶಾಲಾ ಶಿಕ್ಷಕರ ದಾಖಲೆ ನೇಮಕಾತಿ. 1 ರಿಂದ 7 ನೇ ತರಗತಿಯ

# ಸಿದ್ಧಗಂಗಾ

ಸಂಪುಟ-33 ಸಂಚಿಕೆ-7 ಜುಲೈ-1997.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಬೇಡಿ ಬೇಸರಿಸಿದೆ ನಾ ನೀಡಿ ಪ್ರೀತಿಸಿದೆನೀ
ತೀಡಿ ತಿದ್ದಿದ ಗುರುವೆ ನನ್ನಸ್ವಾಮಿ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

❃ ❃ ❃

ಬಸವ ಭಕ್ತಿಯ ಬಿತ್ತಿ ಬಸವ ಬೆಳೆಯನೆ ಬೆಳೆದು
ಹಸನ ಮಾಡಿದೆ ಗುರುವೆ ಎದೆ ಹೊಲವ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

❃ ❃ ❃

ರಾಷ್ಟ್ರ ಚಿಂತಕನಾಗಿ ದೇಶ ಪ್ರೇಮವ ಕಲಿಸಿ
ಪ್ರೀತಿಯಲಿ ದಾಸೋಹ ನಡೆಸಿರುವೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

❃ ಹೆಚ್. ವಿ. ವೀರಭದ್ರಯ್ಯ

## ಶ್ರೀವಾಣಿ



### ಕಂಚುಗಲ್ ಬಂಡೇಮಠದ ಶ್ರೀಗಳು

ಶ್ರೀ ಶಿವರುದ್ರಸ್ವಾಮಿಗಳು ಭಕ್ತರ ಮನವನ್ನು ಗೆದ್ದವರು. ಸೇವೆಗೆ ಹೆಸರಾದವರು. ಹಸುಮಗುವಿನಂಥವರು. ಸಂಸ್ಕೃತ ವಿದ್ವಾಂಸರು. ಶರಣ ಸಂಸ್ಕೃತಿಯಲ್ಲಿ ಅರಳಿದವರು. ಪೂಜ್ಯ ಶ್ರೀ ಉದ್ದಾನಸ್ವಾಮಿಗಳವರ ಕಣ್ಬೆಳಕಿನಲ್ಲಿ ಬೆಳೆದು ಬಂದ ಸುದೈವಿಗಳು. ಕನಕಪುರ ದೇಗುಲಮಠದ ಲಿಂಗೈಕ್ಯ ಮಹಾಲಿಂಗಸ್ವಾಮಿಗಳ ಪ್ರಾಣಸ್ನೇಹಿಗಳು. ಸಿದ್ಧಗಂಗಾ ಮಠದ ಅಭಿವೃದ್ಧಿಯಲ್ಲಿ ಆನಂದವನ್ನು ಕಾಣುತ್ತಿದ್ದರು. ಪ್ರಚಾರ, ಪ್ರದರ್ಶನಗಳಿಂದ ದೂರ ನಿಂತ ವಿನಯ ಶೀಲರು. ಬಂಡೇಮಠಕ್ಕೆ 1938 ರ ಮೇ ತಿಂಗಳಲ್ಲಿ ಶ್ರೀ ತೋಂಟದಾರ್ಯಸ್ವಾಮಿಗಳವರ ಕರಕಮಲ ಸಂಜಾತರಾಗಿ ಅಧಿಕಾರ ಸ್ವೀಕರಿಸಿದರು. ಪೂರ್ವಾಶ್ರಮದಲ್ಲಿ ನೆಲಮಂಗಲ ತಾಲ್ಲೂಕಿನ ಹಾರೋಕ್ಯಾತನಹಳ್ಳಿಯ ಶಿವಭಕ್ತರಾದ ಶ್ರೀ ಚಿಕ್ಕವೀರಪ್ಪ ಮತ್ತು ಬಸಮ್ಮನವರ ಧರ್ಮ ಶಿಶುವಾಗಿ ಜನಿಸಿದರು. ಮೃದು ಭಾಷಿಗಳು. ದಾಸೋಹದಲ್ಲಿ ನಿಷ್ಠೆ. ಆಡಂಬರದ ನುಡಿಗಳನ್ನಾಡಿದವರಲ್ಲ. ಪೊಳ್ಳು ಆಶ್ವಾಸನೆಗಳನ್ನಿತ್ತವರಲ್ಲ. "ಎನಗಿಂತ ಕಿರಿಯರಿಲ್ಲ" ಎಂಬ ಅಣ್ಣ ಬಸವಣ್ಣನವರ ವಾಣಿಯನ್ನು ಜೀವನದಲ್ಲಿ ಅಳವಡಿಸಿಕೊಂಡಿದ್ದರು. ಬಿಡುವಿನ ವೇಳೆಯಲ್ಲಿ ಪಂಚಾಕ್ಷರಿ ಮಂತ್ರ ಬರೆಯುವ ಪರಿಪಾಠಿಗಳಾಗಿದ್ದರು. ಕುದುರೆ ಸವಾರಿಮಾಡಿ ಭಕ್ತಾದಿಗಳ ಮನೆಗಳಿಗೆ ಭೇಟಿ ಕೊಟ್ಟು ಅವರ ಧಾರ್ಮಿಕ ಕೆಲಸ ಕಾರ್ಯಗಳನ್ನು ಆಗುಮಾಡುತ್ತಿದ್ದರು. ಬೇರೆ ಬೇರೆ ಮಠಾಧೀಶರೊಡನೆ ಕಿಂಕರತ್ವದೊಂದಿಗೆ ಬೆರೆಯುತ್ತಿದ್ದರು. ತಮ್ಮ

ಗುರುಗಳ ಕಾಲದಲ್ಲಿ ಪುಟ್ಟ ಪ್ರಮಾಣದಲ್ಲಿದ್ದ ಮಠವನ್ನು ದೊಡ್ಡದಾಗಿ ಬೆಳೆಸಿ ಭಕ್ತಾದಿಗಳ ಪ್ರೀತಿಗೌರವಗಳನ್ನು ಸಂಪಾದಿಸಿದರು. ಶಿಕ್ಷಣ ಸಂಸ್ಥೆಗಳ ಏಳಿಗೆಗಾಗಿ ದುಡಿದರು, ಶಿಕ್ಷಕರನ್ನು ಆತ್ಮೀಯವಾಗಿ ನೋಡಿಕೊಂಡರು, ವಿದ್ಯಾರ್ಥಿಗಳನ್ನು ಮೈದಡವಿ ಪ್ರೀತಿಸಿದರು. ಮಠಾಧಿಪತಿಗಳು ಸಚ್ಚಾರಿತ್ರ್ಯ ಸತ್ಪರಂಪರೆಯ ಸಂರಕ್ಷಣೆಯ ವಾರಸುದಾರರಾಗಬೇಕೆಂಬಲ್ಲಿ ಎರಡು ಮಾತಿಲ್ಲದಂತೆ ನಡೆದು-ನುಡಿದು ತೋರಿಸಿದರು. ನಿರ್ಮಮ, ನಿರಹಂಕಾರದ ನಿಚ್ಚಳ ಜಂಗಮ ನಿರಾಭಾರಿತ್ವವನ್ನು ಚಾಚೂ ತಪ್ಪದೆ ನಡೆಸಿದರು. ತಮ್ಮ ಮಠಕ್ಕೆಂದು ನಿಯೋಜಿತವಾಗಿದ್ದ ವಟುವನ್ನು ಸಿದ್ಧಗಂಗಾ ಮಠಕ್ಕೆ ಉತ್ತರಾಧಿಕಾರಿಗಳನ್ನಾಗಿ ಸಲು ಒಪ್ಪಿಸಿದ ತ್ಯಾಗ ಸಂಪನ್ನತೆಯನ್ನು ಸ್ಮರಿಸಬೇಕು. ಇಂದು (ದಿನಾಂಕ 10-7-97) ಬೆಳಿಗ್ಗೆ 8-20 ಕ್ಕೆ ಶಿವರುದ್ರಸ್ವಾಮಿಗಳು ಲಿಂಗದೊಳಗಾಗಿದ್ದಾರೆ. ಶ್ರೀಗಳವರ ಆದರ್ಶ ನಡೆ-ನುಡಿಗಳನ್ನು ಅನುಸರಿಸುವುದರ ಮೂಲಕ ಭಕ್ತಾದಿಗಳು ಹಾಗೂ ಕಿರಿಯ ಶ್ರೀಗಳಾಗಿರುವ ಶ್ರೀ ಬಸವಲಿಂಗಸ್ವಾಮಿಗಳು ಶ್ರೀ ಮಠದ ಸೇವಾ ಚಟುವಟಿಕೆಗಳನ್ನೆಲ್ಲ ನಿರಂತರ ನಡೆಸಿಕೊಂಡು ಹೋಗಬೇಕು. ಅದೇ ಶಿವರುದ್ರಸ್ವಾಮಿಗಳಿಗೆ ಅರ್ಪಿಸಬಹುದಾದ ಕಾಣಿಕೆ.

(11-7-97 ರಂದು ಬಂಡೇಮಠದಲ್ಲಿ ನಡೆದ ಶ್ರದ್ಧಾಂಜಲಿ ಸಭೆಯಲ್ಲಿ ನೀಡಿದ ಆಶೀರ್ವಚನದಿಂದ ಸಂಗ್ರಹ)

---

## ಶ್ರೀ ಶಿವರುದ್ರಸ್ವಾಮಿಗಳಿಗೆ ಶ್ರದ್ಧಾಂಜಲಿ

ಬೆಂಗಳೂರು ಜಿಲ್ಲೆ ಸೋಲೂರು ಹೋಬಳಿ ಕಂಚುಗಲ್ಲು ಬಂಡೇಮಠಾಧ್ಯಕ್ಷರಾದ ಪರಮ ಪೂಜ್ಯ **ಶ್ರೀ ಶಿವರುದ್ರಮಹಾಸ್ವಾಮಿಗಳವರು** 10-6-97 ರಂದು ಲಿಂಗೈಕ್ಯರಾದರು. ಅದಕ್ಕಾಗಿ 'ಸಿದ್ಧಗಂಗಾ' ಅತೀವ ಸಂತಾಪ ವ್ಯಕ್ತಪಡಿಸಿದೆ. ಅನುಭಾವಿಗಳೂ, ಪೂಜ್ಯರು, ಶರಣ ಸಂಸ್ಕೃತಿಯ ಸಾಕಾರಮೂರ್ತಿಗಳು ಶಿಕ್ಷಣ ಪ್ರೇಮಿಗಳು, ದಯಾ ಪರರೂ ಆಗಿದ್ದು, ಗ್ರಾಮೀಣ ಬಡಮಕ್ಕಳ ವಿದ್ಯಾ ಪ್ರಸಾರಕ್ಕೆ ತುಂಬಾ ಶ್ರಮಿಸಿದ್ದರು. ಪೂಜ್ಯರ ಲಿಂಗೈಕ್ಯದಿಂದಾಗಿ ಧಾರ್ಮಿಕ ಗುರುಪರಂಪರೆಯ ನಿಷ್ಠಾವಂತ ಧರ್ಮಗುರು ಒಬ್ಬರನ್ನು ಕಳೆದುಕೊಂಡಂತಾಗಿದೆ ಅವರ ಸರಳತೆ, ಸದ್ಬುದ್ಧಿ, ಸದುವಿನಯ, ಸೌಹಾರ್ದಭಾವಗಳನ್ನು ಭಕ್ತಾಭಿಮಾನಿಗಳು ಪಾಲಿಸುವುದೊಂದೇ ಪೂಜ್ಯರಿಗೆ ನಾವು ಸಲ್ಲಿಸುವ ಭಕ್ತಿಕುಸುಮಾಂಜಲಿ. ಬಸವಾದಿ ಪ್ರಮಥರು ಪೂಜ್ಯರ ಆತ್ಮಕ್ಕೆ ಚಿರಶಾಂತಿಯನ್ನು ನೀಡಲೆಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.

## ಶ್ರೀ ಸಿದ್ಧಲಿಂಗೇಶ್ವರ ವಚನ



ಸುಡುವಗ್ನಿ ಕಾಷ್ಠದಿರವ ಬಲ್ಲುದೆ ?
ಕೊರೆದು ಹರಿವ ಉದಕ ಗಿರಿಯ ಗರ್ವವ ಬಲ್ಲುದೆ ?
ಮುರಿದು ತಿಂಬ ತೋಳ ಕುರಿಯ ಮರಿಯ ಬೇನೆಯ ಬಲ್ಲುದೆ?
ಅಯ್ಯಾ ತನ್ನವಸರಕ್ಕೆ ಆರನಾದರೆಯೂ ಸಾಧಿಸಿ ಭೇದಿಸಿ
ಕೊಂದೆ ತಿಂದೆನೆಂಬುವ
ಅಸತ್ಯ ಸುಸತ್ಯಗಳ ಕುರುಹ ಬಲ್ಲನೆ?
ಸತ್ಯದ ಕುರುಹರಿಯನಾಗಿ ಶಿವಭಕ್ತಿಯನೆಂತರಿವನಯ್ಯಾ
ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ !

ಬೆಂಕಿಯು ಎಂತಹ ಕಟ್ಟಿಗೆಯಿದ್ದರೂ ಅದನ್ನು ಸುಟ್ಟು ಬಿಡುವುದು. ಹರಿವನೀರು ತನ್ನ ಮಾರ್ಗದಲ್ಲಿ ಹತ್ತುವ ಎಂತಹ ಪರ್ವತವನ್ನಾದರೂ ಕೊರೆದೇ ಮುಂದೆ ಸಾಗುವುದು. ತೋಳ ತಾನು ತಿನ್ನಬೇಕೆಂದಿದ್ದ ಕುರಿಯ ಮರಿಯ ಕಷ್ಟವನ್ನೆಂದೂ ತಿಳಿಯದು. ಅದರಂತೆಯೇ ತನ್ನ ಸ್ವಾರ್ಥಸಾಧನೆಗಾಗಿ ಯಾರನ್ನಾದರೂ ಪೀಡಿಸಲು ಸಿದ್ಧವಾದ ವ್ಯಕ್ತಿಗೆ ಧರ್ಮಾ ಧರ್ಮಗಳ ವಿಚಾರ ಮಾಡುವ ಅವಶ್ಯಕತೆಯೇ ಬೀಳುವುದಿಲ್ಲ. ಅಂತಹ ವ್ಯಕ್ತಿಯು ಶಿವಭಕ್ತನಾಗಿ ಶಿವಸುಖವನ್ನುಣ್ಣನು, ಎಂದೂ ಶಿವಕೃಪೆಗೆ ಪಾತ್ರನಾಗನು.

[ ಕೃಪೆ-ಷಟ್‌ಸ್ಥಲ ಜ್ಞಾನಸಾರಾಮೃತ-ಶ್ರೀ ತೋಂ. ಸಿ. ಕೈಂ. ಸೇ. ಸಂಘ. ಎಡೆಯೂರು-ಗದಗ].

**ಲೇಖಕರಲ್ಲಿ ಮನವಿ**

"ಸಿದ್ಧಗಂಗಾ" ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ, ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ 32ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದೆ. ತ್ರಿವಿಧ ದಾಸೋಹ ತತ್ಪರತೆಯಿಂದ ಮುನ್ನಡೆಯುತ್ತಿರುವ ಪತ್ರಿಕೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

" ಸಂಪಾದಕರು "
'ಸಿದ್ಧಗಂಗಾ' ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾಮಠ
ತುಮಕೂರು ಜಿಲ್ಲೆ–572104.

ವಾರ್ಷಿಕ ಚಂದಾ 35-00 ರೂ
ಆಜೀವ ಸದಸ್ಯತ್ವ 500-00

ಪವಾಡ ನಡೆಯಿತು–3

## ಸಂಪಾದಕೀಯ

ವಜ್ರಮಹೋತ್ಸವ. ಅದೊಂದು ಅಭೂತಪೂರ್ವ ಸಮಾರಂಭ. ಕರ್ನಾಟಕದ ಧಾರ್ಮಿಕ ಇತಿಹಾಸಕ್ಕೆ ಸಾರ್ಥಕಜೀವನದ ಪುಟಗಳನ್ನು ಸೇರಿಸಿದ ಅವಿಸ್ಮರಣೀಯದೃಶ್ಯ. "ನುಡಿದು ಬೋಧಿಸುವುದಕ್ಕಿಂತ ನಡೆದು ತೋರಿಸುವ, ನಿರಾಶೆ ಎಳ್ಳಷ್ಟೂ ಇಲ್ಲದ ಶ್ರೀ ಶಿವಕುಮಾರಸ್ವಾಮಿಗಳು ಭವಿಷ್ಯ ಭಾರತದ ಆಶಾವಾದದ ಸಂಕೇತ"ವೆಂಬುದನ್ನು ಮನಗಂಡ ನಾಡು ಅರ್ಪಿಸಿದ ಭಕ್ತಿಗೌರವಗಳ ಕೃತಜ್ಞತೆಯ ಸಮಾವೇಶ. ದಿನಾಂಕ 22, 23 ಮತ್ತು 24ರ ಮಾರ್ಚಿ 97 ಶ್ರೀ ಮಠದ ಸೇವಾ ಜೀವನಕ್ಕಿಟ್ಟ ಚಿನ್ನದ ಕಳಸ.

ವಜ್ರಮಹೋತ್ಸವ ಸ್ಮಾರಕ ಭವ್ಯ ಪ್ರಸಾದನಿಲಯವನ್ನು ಉದ್ಘಾಟಿಸುತ್ತ, "ಸಿದ್ಧಗಂಗಾ ಶ್ರೀಗಳ ತಪೋಬಲಕ್ಕೆ ತಲೆಬಾಗಲೇಬೇಕು" ಎಂದು ರಾಷ್ಟ್ರದ ಪ್ರಧಾನಿಗಳಾದ ಮಾನ್ಯ ಶ್ರೀ ಹೆಚ್.ಡಿ. ದೇವೇಗೌಡರು ನುಡಿಯುತ್ತ "ಶೈಕ್ಷಣಿಕ, ಧಾರ್ಮಿಕ ಮತ್ತು ಸಾಮಾಜಿಕ ಕ್ಷೇತ್ರದಲ್ಲಿ ಜಾತಿ ಭೇದವನ್ನು ದೂರಸರಿಸಿ, ಎಲ್ಲವರ್ಗದ ಬಡವರ್ಗದ ಮಕ್ಕಳನ್ನು ಒಂದೆ ಪಂಕ್ತಿಯಲ್ಲಿ ಕೂಡಿಸಿ ಅನ್ನದಾನ, ವಿದ್ಯಾದಾನ ಮಾಡಿದ ಕೀರ್ತಿ ಶ್ರೀ ಶಿವಕುಮಾರಸ್ವಾಮಿಗಳಿಗೆ ಸಲ್ಲಬೇಕಿದೆ" ಎಂದರು. ಮುಂದುವರಿದು "ಬರಿ ಕೈಯಲ್ಲಿ ಬಂದೆ, ಬರಿ ಕೈಯಲ್ಲಿ ಹೋಗುವೆ" ಎಂಬ ಪೂಜ್ಯ ಶ್ರೀಗಳವರ ಶ್ರೀವಾಣಿಯನ್ನು ರಾಷ್ಟ್ರದ ಎಲ್ಲಾ ರಾಜಕಾರಣಿಗಳು ಅರ್ಥಮಾಡಿಕೊಳ್ಳಬೇಕಿದೆ ಎಂದುದರ ಜೊತೆಗೆ "ಬಸವಣ್ಣನವರು ಹಿಂದೆ ಹೇಳಿದ ನಿಂದಕರು ಇರಬೇಕು...." ಎಂಬ ವಚನದ ಅರ್ಥವೇ ಬೇರೆ, ಆದರೆ ಇಂದಿನ ಪರಿಸ್ಥಿತಿಯಲ್ಲಿ ಅದರ ಅರ್ಥವೇ ಬೇರೆಯಾಗಿದೆ ಎಂದ ಅವರು ಎಲ್ಲ ಕೆಲಸಗಳನ್ನು ನಿಂದಿಸುತ್ತಾ ಹೋದರೆ ಸಮಾಜ ತತ್ತರಿಸುತ್ತದೆ ಎಂದ ಪ್ರಧಾನಿಗಳು ಶ್ರೀಗಳ ತಪೋಬಲದಿಂದ ಎಲ್ಲಾ ಸಂಕಷ್ಟಗಳ ಪರಿಹಾರ ಸಾಧ್ಯ ಎಂದು ಅವರು ಹಿಂದೊಮ್ಮೆ ಶ್ರೀ ಮಠದಲ್ಲಿ ಉಂಟಾದ ಪರಿಸ್ಥಿತಿಯ ಬಗ್ಗೆ ರಾಜಕಾರಣಿಗಳೂ ಕೈಚೆಲ್ಲಿ ಕುಳಿತಾಗ ಅದುಪರಿಹಾರ ಕಂಡದ್ದು ನೋಡಿದರೆ ಈಮಾತು ಸತ್ಯಎಂದಾಗುತ್ತದೆ" ಎಂದು ಶ್ರೀಗಳವರ ತಪೋಬಲವನ್ನು ಸಮರ್ಥಿಸುತ್ತ ಶ್ರೀ ಶಿವಕುಮಾರಸ್ವಾಮಿಗಳಂತಹ ಮತ್ತೊಬ್ಬಸ್ವಾಮಿಯನ್ನು ದೇಶದಲ್ಲೆಲ್ಲೂ ತಾನುಕಂಡಿಲ್ಲ ಎಂದು ಭಕ್ತಿನುಡಿಗಳನ್ನಾಡಿದರು.

ಕೇಂದ್ರ ಮಾನವಸಂಪನ್ಮೂಲ ಅಭಿವೃದ್ಧಿ ಖಾತೆ ಸಚಿವರಾದ ಮಾನ್ಯ ಶ್ರೀ ಎಸ್.ಆರ್. ಬೊಮ್ಮಾಯಿ ಅವರು ಮಾತನಾಡಿ "ವೀರಶೈವಧರ್ಮ ವಿಶ್ವಧರ್ಮವಾಗಿದ್ದು ಅದನ್ನು ಒಂದು ಜಾತಿಗೆ ಸಂಕುಚಿತಗೊಳಿಸುವುದು ತಪ್ಪು. ಬಸವಣ್ಣ ಕೇವಲ ಮಾನವನಿಗೆ ಮಾತ್ರವಲ್ಲ ಸಕಲಜೀವಿಗಳ ಲೇಸನ್ನು ಬಯಸಿದವ. ಬಸವತತ್ವವೇ ಇಂದುಸಾಮಾಜಿಕ ನ್ಯಾಯದ ರೂಪದಲ್ಲಿ ಕಾರ್ಯ ರೂಪಕ್ಕೆ ಬರುತ್ತಿದೆ" ಎನ್ನುತ್ತ ಪೂಜ್ಯ ಡಾ|| ಶ್ರೀ ಶಿವಕುಮಾರಸ್ವಾಮಿಗಳವರು ಬಸವತತ್ವಗಳನ್ನು ಅನುಷ್ಠಾನಕ್ಕೆ ತಂದಿರುವ ಪುಣ್ಯಶೀಲರಾಗಿದ್ದಾರೆ ಎಂದು ನುಡಿದರು.

"ಸಿದ್ಧಗಂಗಾ" ವಿಶೇಷ ಸಂಚಿಕೆಯನ್ನು ಬಿಡುಗಡೆ ಮಾಡಿದ ರಾಜ್ಯದ ಉಪ ಮುಖ್ಯಮಂತ್ರಿಗಳಾದ ಶ್ರೀ ಸಿದ್ಧರಾಮಯ್ಯನವರು ಸಮಾಜದ ಎಲ್ಲ ಕ್ಷೇತ್ರದಲ್ಲಿ ಎಲ್ಲರಿಗೂ ಸಮಾನ ಅವಕಾಶಸಿಕ್ಕಾಗ ಮಾತ್ರ ಸರ್ವತೋಮುಖ ಅಭಿವೃದ್ಧಿ ಸಾಧ್ಯ. ಈಕಾರ್ಯವನ್ನು ಹನ್ನೆರಡನೇ ಶತಮಾನದಲ್ಲಿ ಬಸವಣ್ಣನವರು ಪ್ರಾರಂಭಿಸಿದರು. ಸಂಪತ್ತು ವ್ಯಕ್ತಿಯಲ್ಲಿ ಕೇಂದ್ರೀಕೃತವಾಗಬಾರದು. ಅದು ಸಮಾಜದ್ದಾಗಬೇಕು ಎಂದು ಅವರು ಆಶಿಸಿದ್ದರು.

ಭಾರತೀಯ ಸಮಾಜ ಏರು ಪೇರುಗಳಿಂದ, ಅಸಮಾನತೆಯಿಂದ ಕೂಡಿದ್ದು, ಇಲ್ಲಿ ಒಂದು ವರ್ಗ ಶಿಕ್ಷಣಪಡೆದು ಎಲ್ಲ ಕ್ಷೇತ್ರಗಳಲ್ಲಿಯೂ ಅಭಿವೃದ್ಧಿ ಸಾಧಿಸಿ ಬಲಿಷ್ಠವಾಗಿ ಬೆಳೆದರೆ, ಇನ್ನೊಂದು ವರ್ಗ ಅಕ್ಷರ ಸಂಸ್ಕೃತಿಯಿಂದವಂಚಿತಗೊಂಡು ಕೆಳಸ್ತರದಲ್ಲಿಯೇ ಉಳಿಯಿತು. ಬಸವಣ್ಣ ಈ ಅಸಮಾನತೆಯನ್ನು ತೊಡೆದು ಹಾಕಿ ಸಮಾನತೆಯನ್ನು ಹುಟ್ಟುಹಾಕಲು ಪ್ರಯತ್ನ ನಡೆಸಿದರು ಎಂದು ಸಿದ್ಧರಾಮಯ್ಯ ಹೇಳಿದರು.

ಸುತ್ತೂರು ಮಠದ ಜಗದ್ಗುರು ಶ್ರೀ ಶಿವರಾತ್ರಿದೇಶಿಕೇಂದ್ರಸ್ವಾಮಿಗಳು ಅಭಿನಂದನಾ ನುಡಿಗಳನ್ನಾಡುತ್ತ ಶ್ರೀ ಶಿವಕುಮಾರಸ್ವಾಮಿಗಳು ನಮ್ಮೆಲ್ಲರಿಗೆ ಆದರ್ಶರಾಗಿದ್ದಾರೆ. ಕಾಯಕ ನಿಷ್ಠೆ, ದಾಸೋಹ ಶ್ರದ್ಧೆ, ಮಾನವೀಯತೆ, ಸಚ್ಚಾರಿತ್ರ್ಯಗಳ ಸಾಕಾರರೂಪವಾಗಿದ್ದಾರೆ ಎಂದು ನುಡಿದರು

ಅಧ್ಯಕ್ಷತೆ ವಹಿಸಿದ್ದ ರಾಜ್ಯದ ಮುಖ್ಯ ಮಂತ್ರಿಗಳಾದ ಮಾನ್ಯ ಶ್ರೀ ಜೆ. ಹೆಚ್. ಪಟೇಲ್ ಅವರು "ಇಲ್ಲಿ ಎಲ್ಲರೂ ಕೊರತೆಯನ್ನು ಅನುಭವಿಸುವವರು. ಇಲ್ಲದವರಿಗೆ ತಿನ್ನುವ ಕೊರತೆ, ಉಳ್ಳವರಿಗೆ ತಿನ್ನಬಾರದ್ದನ್ನು ತಿಂದು, ಬದುಕ ಬಾರದ್ದನ್ನು ಬದುಕಿದ ಕೊರತೆ. ಇದು ಪರಿಹಾರವಾಗಬೇಕಾದರೆ ಮೊದಲು ನಮ್ಮಲ್ಲಿರುವ ಅತೀ ಸುಖಾಪೇಕ್ಷೆಯನ್ನು ಬಿಟ್ಟು ಬಿಡಬೇಕು. ಲೋಭಿತನ ಹಾಗೂ ಕ್ರೌರ್ಯವನ್ನು ವರ್ಜಿಸಬೇಕು. ಇದನ್ನು ಗೆದ್ದವರೇ ನಿಜವಾದ ಮನುಷ್ಯರು. ಡಾ|| ಶ್ರೀ ಶಿವಕುಮಾರಸ್ವಾಮಿಗಳು ಆ ಸಾಲಿಗೆ ಸೇರಿದವರು. ತಮ್ಮ ಸರ್ಕಾರಕ್ಕೆ ಮಠದ ಕೃಪೆಯಿರಲಿ. ಕೃಪೆಯೆಂದರೆ ನಿಮ್ಮಲ್ಲಿರುವ ಕೆಲವು ಗುಣಗಳಾದರೂ ನಮಗೆ ಬಂದು ಅದರಿಂದ ಒಳ್ಳೆಯದಾಗಲಿ ಎಂಬುದೇ ನನ್ನ ಅಪೇಕ್ಷೆ" ಎಂದು ಮಾತು ಮುಗಿಸಿದರು.

ಆಶೀರ್ವಚನ ನೀಡಿದ ಪರಮ ಪೂಜ್ಯ ಶ್ರೀ ಶ್ರೀಗಳವರು "ಭರತಖಂಡ ಜಗತ್ತಿಗೆ ಮಾರ್ಗದರ್ಶನ ನೀಡುತ್ತಿದ್ದದೇಶ. ಆ ಕಾರ್ಯ ಈಗ ಮತ್ತೆ ಆಗಬೇಕಾಗಿದೆ. ಆ ಚಿಂತನೆ ಮತ್ತು ಅದನ್ನು ಹೇಳುವ ಶಕ್ತಿಉಳ್ಳ ವ್ಯಕ್ತಿಗಳು ಈಗಲೂ ನಮ್ಮ ನಡುವೆ ಇದ್ದಾರೆ. ಜಗತ್ತಿನ ಈಗಿನ ಬಹುಪಾಲು ಸಮಸ್ಯೆಗಳಿಗೆ ಬಸವಣ್ಣನವರ ತತ್ವ ಪರಿಹಾರ ಒದಗಿಸಬಲ್ಲುದು" ಎಂದರು.

ಸಮಾರಂಭದಲ್ಲಿ ಮಾಜಿಸಚಿವರಾದ ಶ್ರೀ ಎಂ. ರಾಜಶೇಖರಮೂರ್ತಿ, ಬಂದೀಖಾನೆ ಸಚಿವ ಶ್ರೀ ವಿ. ಸೋಮಣ್ಣ, ಕಾರ್ಮಿಕ ಖಾತೆ ಸಚಿವ ಶ್ರೀ ಬಿ. ಸತ್ಯನಾರಾಯಣ, ಲೋಕಸಭಾಸದಸ್ಯ ಶ್ರೀ ಸಿ. ಎಸ್. ಭಾಸ್ಕರಪ್ಪ, ಶಾಸಕ ಶ್ರೀ ಎಸ್. ಶಿವಣ್ಣ, ಮಾಜಿ ಸಚಿವ ಶ್ರೀ ಲಕ್ಷ್ಮಿನರಸಿಂಹಯ್ಯ ಅವರು ಅತಿಥಿಗಳಾಗಿ ಭಾಗವಹಿಸಿದ್ದರು.

ಕಿಕ್ಕಿರಿದ ಜನಸ್ತೋಮವನ್ನು, ಅದರ ಶಿಸ್ತನ್ನು, ಸಂಯಮವನ್ನು ಕಂಡ ಪ್ರತಿಯೊಬ್ಬರೂ ಮೆಚ್ಚುಗೆಯ ನುಡಿಗಳನ್ನಾಡಿದರು. ಸುವಿಶಾಲವಾದ ಬೃಹತ್‌ಸಭಾಂಗಣ, ಎತ್ತರವಾದ ಸಭಾವೇದಿಕೆ, ಹಿನ್ನೆಲೆಯಲ್ಲಿ ಬಸವಣ್ಣನವರ ಎತ್ತರವಾದ ಭಾವಚಿತ್ರ, ಶ್ರೀಗಳವರ ಆಳೆತ್ತರದ ಚಿತ್ರ "ಕಾಯಕವೇ ಕೈಲಾಸ" ಎಂಬ ಧ್ಯೇಯವಾಕ್ಯ, ಘಮಘಮಿಸುವ ಹೂವಿನ ಅಲಂಕಾರ, ಅರುವತ್ತಾರು ದೀಪಗಳ ಮಂಗಳಪ್ರಕಾಶ, ರಕ್ಷಣಾಪಡೆಯವರು ಕಟ್ಟೆಚ್ಚರಿಕೆಯಲ್ಲಿ ವಜ್ರಮಹೋತ್ಸವಾಚರಣೆಯ ಎರಡನೆಯದಿನ ಭವ್ಯ ಪ್ರಸಾದ ನಿಲಯದ ಉದ್ಘಾಟನಾ ಸಮಾರಂಭ ಯಶಸ್ವಿಯಾಗಿ ನೆರವೇರಿತು.

ತೊಂಬತ್ತರ ತುಂಬು ತಪಸ್ವಿಯ ನಗುಮೊಗದ ಸೇವೆಯನ್ನು ಸವಿದು ಸಂತೃಪ್ತಿ, ಸಂತೋಷಗಳನನುಭವಿಸಿತು ಜನಸಾಗರ.

## ವಚನ ಪಿತಾಮಹ ಡಾ|| ಫ, ಗು, ಹಳಕಟ್ಟಿ

ಶ್ರೀ ಮಡಿವಾಳದೇವರು, ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯ,
ನಾಗನೂರ ಶ್ರೀ ರುದ್ರಾಕ್ಷಿಮಠ, ಶಿವಬಸವ ನಗರ, ಬೆಳಗಾವಿ-590010.

ಎಂಟನೂರು ವರ್ಷಗಳ ಹಿಂದೆ ಬಸವಾದಿ ಪ್ರಮಥರು ಮಾನವ ಜನಾಂಗದ ಉದ್ಧಾರಕ್ಕಾಗಿ ಜಾತಿ, ಭೇದವೆನಿಸದೇ ಸತ್ಯ-ಶುದ್ಧ ಕಾಯಕವನ್ನು ಕೈಗೊಂಡು ಕಾಯಕದಿಂದ ಗಳಿಸಿದ ಸಂಪತ್ತನ್ನು ಮಹಾಮನೆಯಲ್ಲಿ ತಂದು ಎಲ್ಲರೂ ಸಮನಾಗಿ ಪ್ರಸಾದ ರೂಪದಲ್ಲಿ ಸ್ವೀಕರಿಸಿದರು. ಅನುಭವ ಮಂಟಪದಲ್ಲಿ ಲೌಕಿಕ ಪಾರಮಾರ್ಥಿಕ ಅನುಭವ ಚರ್ಚಿಸಿದರು. ಶರಣರ ಅನುಭವ ಅವರ ವಚನಗಳಲ್ಲಿ ತುಂಬಿಕೊಂಡಿತ್ತು. ಕಲ್ಯಾಣದ ಚರಜಂಗಮರ ಮೂಲಕ ನಾಡಿನ ಮೂಲೆ ಮೂಲೆಗಳಲ್ಲಿ ವಚನ ಪ್ರಸಾರಗೊಂಡವು. ಕಲ್ಯಾಣ ಕ್ರಾಂತಿಯಾಗಿ ಶರಣರೆಲ್ಲರು ಲಿಂಗೈಕ್ಯರಾದ ಬಳಿಕ ಅವರ ವಚನಗಳು ನಾಡಿನಲ್ಲಿ ಗುಪ್ತವಾಗಿಯೇ ಉಳದವು. ಗುಪ್ತವಾಗಿ ಉಳಿದ ಬಸವಾದಿ ಪ್ರಮಥರ ವಚನ ಸಾಹಿತ್ಯ ಮಠ ಮಾನ್ಯಗಳಲ್ಲಿ ಭಕ್ತರ ಮನೆಯ ಜಗುಲಿಯಲ್ಲಿ, ಗುಹೆಗಳಲ್ಲಿ ಬರಿ ಗೆದ್ದಲು ತಿನ್ನುತ್ತಾ ಪೂಜೆಯನ್ನು ಮಾಡಿಕೊಳ್ಳುತ್ತಾ ಇದ್ದ ತಾಡೋಲೆ ಗ್ರಂಥಗಳನ್ನು ಸಂರಕ್ಷಿಸಲು ಜನರಿಗೆ ತಿಳಿಪಡಿಸಲು ಒಬ್ಬ ಮಹಾವ್ಯಕ್ತಿ ಹುಟ್ಟಿದ. ಅವನೇ ಡಾ|| ಫ, ಗು, ಹಳಕಟ್ಟಿಯವರು.

ಜನನ-ಶಿಕ್ಷಣ-ವೃತ್ತಿ -: ವಿಧೇಯ ತವರು ಮನೆಯಾದ ಸಂಸ್ಕೃತಿಯ ಕೇಂದ್ರವಾದ ಧಾರವಾಡದ ಗುರು ಬಸಪ್ಪ ತಾಯಿ ದಾನಮ್ಮನವರ ಪುಣ್ಯ ಗರ್ಭದಲ್ಲಿ 1880 ನೇ ಜುಲೈ 7 ರಂದು ಫಕೀರಪ್ಪ ಹಳಕಟ್ಟಿಯವರು ಜನಿಸಿದರು. ಗುರುಬಸಪ್ಪನವರು ಒಳ್ಳೆಯ ಲೇಖಕರು, ಪ್ರಾಥಮಿಕ ಶಿಕ್ಷಕರಾಗಿದ್ದರು. ಮೇಲಾಗಿ ದಂಪತಿಗಳು ಶರಣ ಸಂಸ್ಕೃತಿಯ ಬಾಳನ್ನು ಸಾಗಿಸುತ್ತಿದ್ದರು. ಫಕೀರಪ್ಪನು ಇನ್ನೂ ಮೂರು ವರ್ಷದವ ಇದ್ದಾಗಲೇ ತಾಯಿಯವರನ್ನು ಕಳೆದುಕೊಂಡನು. ತಂದೆಯಾದ ಗುರುಬಸಪ್ಪನು ತಾಯಿಯಾಗಿ ತಂದೆಯಾಗಿ ಜೋಪಾನವಾಗಿ ಬೆಳೆಸಿದನು. ಮ್ಯಾಟ್ರಿಕ್ ವರೆಗೆ ಧಾರವಾಡದಲ್ಲಿ ಓದಿ ಮುಂದೆ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಮುಂಬೈಗೆ ಹೋಗಿ ಅಲ್ಲಿ ಸೈನ್ಸ್ ಪದವಿ ಪಡೆದರು. ಗುರುಗಳಿಗೆ ಅಕ್ಕರೆಯ ವಿದ್ಯಾರ್ಥಿಯಾಗಿ ಮನೆಯವರಿಗೆ ಮುದ್ದಿನ ಮಗನಾಗಿ, ಗೆಳೆಯರಿಗೆ ಪ್ರೀತಿಯ ಸ್ನೇಹಿತನಾಗಿ ಕಾಯ್ದೆ ಪರೀಕ್ಷೆಯಲ್ಲಿ ಪಾಸಾದರು. ಅಲ್ಲಿಂದ ಅವರು ಬೆಳಗಾವಿಗೆ ಬಂದರು. ಅಲ್ಲಿ ವಕೀಲ ವೃತ್ತಿ ಪ್ರಾರಂಭ ಮಾಡಿ ಒಳ್ಳೆಯ ವಕೀಲರೆಂದು ಪರೋಪಕಾರಿ ಮಹಾನುಭಾವಿಗಳೆಂದು ಹೆಸರು ಗಳಿಸಿದರು. ಹಳಕಟ್ಟಿಯವರಿಗೆ ಬೆಳಗಾವಿಯ ಹವೆ ಒಗ್ಗದ್ದಕ್ಕೆ ವಿಜಾಪುರಕ್ಕೆ ವರ್ಗ ಮಾಡಿಸಿಕೊಂಡರು. ಅಲ್ಲಿ ಹೋಗಿ ವಚನ ಅಧ್ಯಯನ ಪ್ರಾರಂಭ ಮಾಡಿದರು.

**ವಚನ ಸಾಹಿತ್ಯಕಡೆ ಗಮನ :–** ಒಂದು ಸಲ ವೀರಶೈವರ ಮನೆಗೆ ಹೋದಾಗ ಅಲ್ಲಿ ತಾಡವೋಲೆ ಗ್ರಂಥಗಳನ್ನು ನೋಡಿದರು. ಅವುಗಳಲ್ಲಿ ಚಾಮರಸನೆಂಬ ಕವಿ ಬರೆದ "ಪ್ರಭುಲಿಂಗ ಲೀಲೆ" ಎಂಬ ಷಟ್ಪದಿ ಗ್ರಂಥ ಹಾಗೂ ಗುಬ್ಬಿಮಲ್ಲ ಕವಿ ಸಂಗ್ರಹಿಸಿದ "ಗಣ ರತ್ನ ಮಾಲೆ" ಎಂಬ ವಚನ ಗ್ರಂಥಗಳು ಅವರ ಮನಸ್ಸನ್ನು ಆಕರ್ಷಿಸಿದವು. ಅವುಗಳನ್ನು ಓದಿ ಸಂತೋಷಪಟ್ಟರು. ಕನ್ನಡ ಭಾಷೆಯಲ್ಲಿ ಇಂತಹ ಉತ್ತಮ ಗ್ರಂಥಗಳು ಇದ್ದು ಕೇವಲ ದೇವರ ಕೋಣೆಯೊಳಗಿನ ಪೆಟ್ಟಿಗೆಗಳಲ್ಲಿ ಹುಳುಗಳ ಪಾಲಾಗಿದ್ದನ್ನು ಕಂಡು ವ್ಯಥೆ ಪಟ್ಟರು. ಅಲ್ಲಿಂದ ಅವರು ವಚನ ವಾಙ್ಮಯದ ಶೋಧನೆಗೆ ಹೊರಟರು. ಮನೆ-ಮನೆಗಳನ್ನು ಮಠ-ಮಠಗಳನ್ನು ಸುತ್ತಿ ಗೆದ್ದಲು ತಿಂದ ತಾಡೋಲೆ ಗ್ರಂಥಗಳನ್ನು ಸಂಗ್ರಹಿಸಿದರು. ಅವರು ಅವಿಶ್ರಾಂತ ಪರಿಶ್ರಮದಿಂದ ಒಂದು ಸಾವಿರ ಕೃತಿಗಳನ್ನು ಸಂಗ್ರಹಿಸಿದರು.

ಆಮೇಲೆ ಸರಳ, ಸುಂದರ, ಜನಸಾಮಾನ್ಯರ ಕೈ ದೀವಿಗೆಯಾಗಬಹುದಾದ ವಚನ ಸಾಹಿತ್ಯದ ಲಾಭ. ಶ್ರೇಷ್ಠತೆಯನ್ನು ಅರಿವಾಗುವಂತೆ ಮಾಡಬಹುದು. ಅವಾಗ ಅವರು ಆ ಸಂಗ್ರಹದಲ್ಲಿ ರಗಳೆ, ಷಟ್ಪದಿ, ಸಾಂಗತ್ಯ, ತ್ರಿಪದಿ, ಹಾಡು ಮೊದಲಾದವುಗಳನ್ನು ಬೇರೆ ಗುಂಪು ಮಾಡಿ ಸ್ವಂತ ಖರ್ಚಿನಲ್ಲಿ ಒಬ್ಬ ಕಾರಕೂನನ್ನು ನೇಮಿಸಿಕೊಂಡು ಅವುಗಳ ನಕಲು ಸಿದ್ಧಪಡಿಸಿದರು. ಆಗಿನ ಕಾಲದಲ್ಲಿ ಅಚ್ಚು ಹಾಕಿ ಪುಸ್ತಕ ಪ್ರಕಟಣೆ ಮಾಡುವುದು ಸಾಧ್ಯವಿರಲಿಲ್ಲ. ಅದಕ್ಕಾಗಿ ಅವರು ತಮ್ಮ ಸ್ವಂತ ಮನೆಯನ್ನು ಮಾರಿ "ಹಿತ ಚಿಂತಕ" ಅಚ್ಚುಕೂಟ ಪ್ರಾರಂಭಿಸಿದರು. ಸುಮಾರು ಅರವತ್ತು ವರ್ಷಗಳ ಕಾಲ ಸತತ ಸಾಹಿತ್ಯ ಸೇವೆ ಸಲ್ಲಿಸಿದರು. ಕನ್ನಡ ನಾಡಿಗೆ, ಕನ್ನಡ ಜನರಿಗೆ, ಕನ್ನಡ ಭಾಷೆಗೆ ಅಮೂಲ್ಯ ಕಾಣಿಕೆಯನ್ನು ನೀಡಿದ್ದಾರೆ. ಜನರಲ್ಲಿ ಧಾರ್ಮಿಕ ಭಾವನೆ ಜಾಗೃತಗೊಳಿಸಲು ನಿಜವಾದ ಧರ್ಮ ಎನ್ನುವುದನ್ನು ಪರಿಚಯಿಸಲು, ವಚನ ಮಹತ್ವ ಜನರಿಗೆ ತಿಳಿಸಲು "ಶಿವಾನುಭವ" ಮಾಸ ಪತ್ರಿಕೆ ಪ್ರಾರಂಭ ಮಾಡಿದರು. ವೀರಶೈವರ ಬಗ್ಗೆ ಹೆಚ್ಚಿನ ಅಧ್ಯಯನಕ್ಕೆ ಅನುಕೂಲ ಒದಗಿಸಿದರು.

**ಶಿಕ್ಷಣ ಪ್ರೇಮಿಗಳು :–** ಕನ್ನಡದ ಗಂಡು ಮೆಟ್ಟಿನ ವಿಜಾಪುರದಲ್ಲಿ ಕನ್ನಡ ಶಾಲೆಗಳಿಗಿಂತ ಮರಾಠಿ ಶಾಲೆಗಳೇ ಹೆಚ್ಚಾಗಿದ್ದನ್ನು ನೋಡಿ ಕನ್ನಡಿಗರ ಬಗ್ಗೆ ಅನುಕಂಪ ಮೂಡಿತು. ನಗರ ಸಭೆ ಶಾಲಾ ಮಂಡಳದ ಸದಸ್ಯರಾದ ನಂತರ ವಿಜಾಪುರದಲ್ಲಿ ಕನ್ನಡಿಗರು ತಲೆ ಎತ್ತುವಂತೆ ಮಾಡಿದರು. ಅಲ್ಲದೆ ಅಂದಿನ ಮುಂಬೆ ವಿಶ್ವವಿದ್ಯಾಲಯದ ಸಿನೇಟರರಾಗಿ ಅಭ್ಯಾಸ ಮಂಡಳಿಯ ಸದಸ್ಯರಾಗಿ, ಪಠ್ಯ ಪುಸ್ತಕದ ಸಂಪಾದಕರಾಗಿ ಪರೀಕ್ಷೆಯ ಮೇಲ್ವಿಚಾರಕರಾಗಿ ಸೇವೆ ಸಲ್ಲಿಸಿದರು. ಎಲ್ಲದರಲ್ಲಿಯೂ ಅವರು ಇರುವುದರಿಂದ ಕನ್ನಡ ಶಿಕ್ಷಣದಲ್ಲಿ ಪ್ರಗತಿ ಕಾಣಿಸಲು ಮತ್ತಷ್ಟು ಸಹಾಯಕವಾಯಿತು. ಅಲ್ಲದೆ ವಿಜಾಪುರದಲ್ಲಿ "ಲಿಂಗಾಯತ ಶೈಕ್ಷಣಿಕ ಸಂಸ್ಥೆ" ಸ್ಥಾಪಿಸಿದರು. ಮತ್ತು ಶ್ರೀ ಸಿದ್ಧೇಶ್ವರ ಹೈಸ್ಕೂಲನ್ನು ಪ್ರಾರಂಭ ಮಾಡಿದರು.



**ಕನ್ನಡಾಂಬೆಯ ಸೇವೆ :–** ಜನರಲ್ಲಿ ಕನ್ನಡದ ಬಗ್ಗೆ ಅಭಿಮಾನ ಹುಟ್ಟಿಸಲು ಕನ್ನಡವನ್ನು ಪ್ರೋತ್ಸಾಹಿಸಲು ಕನ್ನಡ ಭಾಷೆ ಬೆಳೆಸಲು "ನವ ಕರ್ನಾಟಕ" ಪತ್ರಿಕೆಯನ್ನು ಪ್ರಾರಂಭಿಸಿದರು. 1926 ರಲ್ಲಿ ಬಳ್ಳಾರಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಅಧ್ಯಕ್ಷತೆ ವಹಿಸಿದರು

ನಿಜವಾದ ವೀರಶೈವ ಧರ್ಮದ ವ್ಯಕ್ತಿ ಹೇಗೆ ಇರಬೇಕು ಹಾಗೆ ಬಾಳಿದರು. ಸ್ವಧರ್ಮಾಭಿಮಾನಿ, ಪರಧರ್ಮ ಪ್ರೇಮಿ, ಇವರು ಧಾರ್ಮಿಕ ಶ್ರದ್ಧೆ ಕಾರ್ಯಗಳನ್ನು ನೋಡಿ ಜನರು ಅವರನ್ನು 1933 ರಲ್ಲಿ ಧಾರವಾಡದಲ್ಲಿ ನಡೆದ ಅಖಿಲ ಭಾರತ ವೀರಶೈವ ಮಹಾಸಭೆಯ ಅಧ್ಯಕ್ಷರನ್ನಾಗಿ ಮಾಡಿದರು. ಇವರು ಜನಮನ ಗೆದ್ದು ಘನತೆಯ ಗೌರವಕ್ಕೆ ಪಾತ್ರರಾದರು. ಅಷ್ಟೇ ಅಲ್ಲ ಗ್ರಾಮೀಣ ಜನತೆಯ ಉನ್ನತಿಗಾಗಿ, ಸ್ತ್ರೀಯ ಹಿತಕ್ಕಾಗಿ, ಕರ್ನಾಟಕದ ಏಕೀಕರಣಕ್ಕಾಗಿ, ಅಸ್ಪೃಶ್ಯತೆಯ ನಿವಾರಣೆಗಾಗಿ, ಅನೇಕ ಸಂಘ ಸಂಸ್ಥೆಗಳಿಗಾಗಿ ಶ್ರಮಪಟ್ಟಿದ್ದಾರೆ.

**ಪ್ರಶಸ್ತಿಗಳು :–** ಫ. ಗು. ಹಳಕಟ್ಟಿಯವರ ಜೀವನ ಸಾಧನೆಯನ್ನು ಮನಗಂಡ ಬ್ರಿಟೀಷ್ ಸರ್ಕಾರವು "ರಾವ್ ಸಾಹೇಬ, ರಾವ್ ಬಹದ್ದೂರ್" ಎಂಬ ಪದವಿಯನ್ನು ಕೊಟ್ಟರು. ಮತ್ತು ಕರ್ನಾಟಕ ವಿಶ್ವ ವಿದ್ಯಾಲಯದಿಂದ ಡಾಕ್ಟರ್ ಆಫ್ ಲೇಟರ್ಸ್ ಕೊಟ್ಟು ಗೌರವಿಸಿದರು. ಜನರು ಅವರನ್ನು "ವಚನ ಪಿತಾಮಹ" ಕರ್ನಾಟಕದ ಮ್ಯಾಕ್ಸ್ ಮೂಲರ ಅರವತ್ತ ನಾಲ್ಕನೇಯ ಆಧುನಿಕ ಪುರಾತನ ಶರಣರೆಂದು, ಘನ ಸಂಪನ್ನ ಅಣ್ಣನೆಂದು, ಸಾಹಿತ್ಯ ಅಭಿಮಾನಿಗಳು "ವಚನ ಶಾಸ್ತ್ರ ಪ್ರವೀಣ" ಎಂದು ಅವರನ್ನು ಕರೆಯುತ್ತಿದ್ದರು.

**ಜ್ಯೋತಿಯಲ್ಲಿ ಜ್ಯೋತಿ ಬೆರೆತಂತೆ :–** ಫ. ಗು. ಹಳಕಟ್ಟಿಯವರು ತಮ್ಮ ಜೀವನದ ಅಖಂಡ ಎಂಬತ್ತನಾಲ್ಕು ವರ್ಷಗಳ ಕಾಲ ಧರ್ಮ, ಸಮಾಜ, ಸಂಸ್ಕೃತಿ ಮತ್ತು ಜನಾಂಗದ ಸರ್ವತೋಮುಖ ಅಭಿವೃದ್ಧಿಗಾಗಿ ಶ್ರಮಪಟ್ಟರು. ಇಂಥ ಮಹಾನುಭಾವರು 1964 ನೇಯ ಜೂನ್ 29 ರಂದು ಹಾಲಿನಲ್ಲಿ ಹಾಲು ಬೆರೆತಂತೆ, ಜ್ಯೋತಿಯಲ್ಲಿ ಪರಂಜ್ಯೋತಿಯಾದರು.



# ಅನುಭಾವಿಯ ದೃಷ್ಟಿಯಲ್ಲಿ

## ಅನುಭಾವಿಗಳ ಆಶ್ರಯ

"ಕನ್ನಡ ಕವಿ ಕಾಳಿದಾಸ" ಶ್ರೀ ಮೋಟಗಿ ಮಲ್ಲಿಕಾರ್ಜುನ, ಅಥಣಿ, ಬೆಳಗಾವಿ ಜಿಲ್ಲೆ.

---

"ಅಯ್ಯಾ ನಿಮ್ಮ ಸಜ್ಜನ ಸದಾಚಾರವ ಕಂಡೆನಾಗಿ
ಎನ್ನ ಕಂಗಳ ಪಟಲ ಹರಿಯಿತ್ತಿಂದು.
ಅಯ್ಯಾ ನಿಮ್ಮ ಸಜ್ಜನ ಸದ್‌ಭಾವರ ಶ್ರೀ ಚರಣಕ್ಕೆರಗಿದೆನಾಗಿ,
ಎನ್ನ ಹಣೆಯ ಲಿಖಿತ ತೊಡೆಯಿತ್ತಿಂದು.
ಚೆನ್ನಮಲ್ಲಿಕಾರ್ಜುನಯ್ಯಾ ನಿಮ್ಮ ಶರಣ ಸಂಗನ ಬಸವಣ್ಣನ
ಪಾದವ ಕಂಡು ಮಿಗೆ ಮಿಗೆ ನಮೋ ನಮೋ ಎನುತಿರ್ದೆನು"

ಮಹಾದೇವಿಯಕ್ಕಗಳು

ಪರಮಾರ್ಥ ಪಥದಲ್ಲಿನ ದಿವ್ಯಾನುಭಾವಿಯು, ಸಹಜ ಭಕ್ತಿಯ ದೇವೋನ್ಮಾದದ ಪರಮಾನಂದ ಸಾಗರದಲ್ಲಿ ಮುಳುಗೇಳುವನು. ಅದರಂತೆ ಈ ಮಹಾನುಭಾವಿ ಆ ಪರಮಾನಂದದ ಪವಿತ್ರ ತರಂಗಗಳನ್ನು, ತನ್ನ ಹೃದಯಾಂತರಾಳದಿಂದ ಪೃಥ್ವಿಯಲ್ಲಿನ ಸಮಸ್ತ ವಾತಾವರಣದಲ್ಲಿ ತೇಲಿಬಿಡುವನು. ಇದು ವಿಶ್ವ ಮಾನವರಾಗಿದ್ದ ಅನುಭಾವಿ ಸಂತ-ಶರಣರ ವಿಶಾಲ ಹೃದಯದ ದಿವ್ಯ ದೃಷ್ಟಿಕೋನವೆನ್ನಬಹುದು. ಹಾಗೆಯೇ ದಿವ್ಯದೃಷ್ಟಿಯ ಅಮೃತವೃಷ್ಟಿಯೆಂತಲೂ ಹೇಳಬಹುದು. ಅಂತೆಯೇ ದೇವ ಪ್ರಿಯರೆನಿಸುವರು ಅನುಭಾವಿಗಳು.

ಇಂತಹ ಅನುಭಾವಿ ಸಂತರ ಆಯುಸ್ಸಿನ ಪ್ರತಿಕ್ಷಣಗಳೂ ಲೋಕಕಲ್ಯಾಣಕ್ಕಾಗಿಯೇ ಮೀಸಲಾಗಿರುತ್ತವೆ. ಇದೇ ಅನುಭವ ರಹಸ್ಯ !

ಈ ಬಗೆಯ ಅನುಭಾವಿಸಂತರ ಶ್ರೇಣಿಯಲ್ಲಿ ಒಬ್ಬರಾಗಿದ್ದರು ಡಾ|| ಆರ್. ಡಿ. ರಾನಡೆಯವರು. ಇವರನ್ನು ಕುರಿತು ಮಹಾ ಸಂಶೋಧಕರಾದ ಡಾ|| ಶಿ. ಚೆ. ನಂದೀಮಠರವರು ವಿಜಾಪುರದಲ್ಲಿ 1954 ರಲ್ಲಿ ನೆರೆಯಲಾದ ಏಳುನೂರೆಪ್ಪತ್ತು ಅಮರ ಗಣಂಗಳ ಪೂಜಾ ಮಹಾಸಭೆಯಲ್ಲಿ ಮಾತನಾಡುವಾಗ ಹೀಗೆ ಹೇಳಿದ್ದರು. "ಭೌತ ಸೃಷ್ಟಿಯಲ್ಲಿ ಮಹಾ ಸಾಹಸಿಯಾದ ಆ ತೇನಸಿಂಗ ಹಿಮಾಲಯ ಪರ್ವತವನ್ನು ಏರಿ ನಿಂತರೆ, ಆಧ್ಯಾತ್ಮ ಸೃಷ್ಟಿಯಲ್ಲಿ ಅನುಭಾವದ ಮಹಾ ಹಿಮಗಿರಿಯನ್ನೇ ಏರಿ ನಿಂತವರು ಅನುಭಾವಿ ಸಂತರಾನಡೆಯವರು. ಎಂದು ಮುಂತಾಗಿ ಈ ದಿವ್ಯವಾಣಿ ನನ್ನ ಹೃದಯಕ್ಕೆ ಅಚ್ಚೊತ್ತಿದಂತಾಯಿತು.



ಮಹಾಸಭೆಯಲ್ಲಿ ಈ ಮಾತನ್ನು ಕೇಳಿದ ನಾನೂ ಕೂಡ ಅನುಭಾವಿ ಸಂತರಾದ ಆರಾನಡೆಯವರಲ್ಲಿ ಆಕರ್ಷಿತನಾಗಿ ಹೋಗಿದ್ದೆ. ಆಗಲೇ ನನಗೆ ಈ ಮಹಾನುಭಾವರ ಬಗೆಗೆ ಭಕ್ತಿ-ಗೌರವ ಭಾವನೆಗಳು ಹೆಚ್ಚುತ್ತಿದ್ದುವು. ಇಂತಹ ಸಂತ ಶರಣರನ್ನು ಕಂಡಾಗ ನನಗೆ ತುಂಬಾ ಸಂತೋಷವಾಗುತ್ತಿತ್ತು. ಅಂತೆಯೇ ನನ್ನ ಹೃದಯ ತುಂಬಿ ಬಂದು ನಾನು ಆನಂದ ಬಾಷ್ಪಗಳನ್ನು ಸುರಿಸುತಿದ್ದೆ. ಈ ವೇಳೆಗೆ ನಾನು ಮೂವತ್ತೈದು ವರ್ಷದ ನವತರುಣನಾಗಿರಬಹುದು.

ಪೂಜ್ಯ ರಾನಡೆಯವರು ಗುರುಲಿಂಗಜಂಗಮ ಮಹಾರಾಜರ ಭಕ್ತಿ ಪಂಥದಲ್ಲಿ ನಲಿಯುತ್ತಿದ್ದವರು. ಅಂತೆಯೇ ಶ್ರೀ ಬಸವಾದಿ ಪ್ರಮಥರ ಹಾಗೂ ಸಂತ ದಾಸ ಶ್ರೇಷ್ಠರ ಅನುಯಾಯಿಗಳಾಗಿದ್ದವರು. ಅದರಂತೆ ಇವರು ವಿಶ್ವದ ವಿವಿಧ ತತ್ವಜ್ಞಾನಿಗಳ ಅನುಭವೋಕ್ತಿಗಳನ್ನು ಆಳವಾಗಿಯೆ ಅಭ್ಯಸಿ, ತಮ್ಮ ದಿವ್ಯ ಜ್ಞಾನಯುಕ್ತವಾದ ಪರಮಾರ್ಥದಲ್ಲಿನ ಕೈದೀಪಗಳಂತಿದ್ದ ಹಲವಾರು ಪವಿತ್ರ ಗ್ರಂಥಗಳನ್ನು ಬರೆದಿದ್ದರು. ಈ ಹೊತ್ತಿಗೆ ಸಂತ ಅನುಭಾವಿ ಶ್ರೀ ರಾನಡೆಯವರು ಜಗತ್ತಿನ ತತ್ವಜ್ಞಾನಿಗಳಲ್ಲೊಬ್ಬರೆಂದು ಪರಿಗಣಿತರಾಗಿದ್ದರು. ಇವರು ನಿಂಬಾಳದಲ್ಲಿ ಇರುತ್ತಿದ್ದರು.

ಗುರುದೇವ ರಾನಡೆಯವರು ಆಗಾಗ ಅಥಣಿಗೆ ಬಂದು ಹೋಗುತ್ತಲಿದ್ದರು. ಇವರ ವಾಸ್ತವ್ಯ ಭಕ್ತವರರಾದ ನಾಡಿನ ಹಿರಿಯ ವ್ಯಕ್ತಿಗಳೆನಿಸಿದ ಶ್ರೀ ಕೆ. ಡಿ. ಸಂಗೋರಾಮ ವಕೀಲರಲ್ಲಿ. ಶ್ರೀ ಮನೋಹರ ದೇಶಪಾಂಡೆಯವರಲ್ಲಿ (ಮುಕ್ಕಾಮ) ಆಗುತ್ತಿತ್ತು. ಪ್ರಶಾಂತಮಯವಾದ ಆ ಮಂದಿರಗಳಲ್ಲಿಯ ವಿಶಿಷ್ಟ ಕೋಣೆಗಳಲ್ಲಿ ಇವರು ಇರುತ್ತಿದ್ದರು.

ಗುರುದೇವರು ಧ್ಯಾನ ಚಿಂತನಪರರಾಗಿದ್ದು ಭಾವ ಪೂರಿತರಾಗಿ ಅರೆದೆರೆದ ನೇತ್ರ ಕಮಲಗಳಿಂದ ಕೂಡಿದವರಾಗಿ ತಮ್ಮ ಧ್ಯಾನ ಮಂದಿರದಿಂದ ಹೊರಬಂದು ಭಕ್ತ ಜನಗಳಿಗೆ ದರ್ಶನ ಲಾಭವನ್ನು ನೀಡುತ್ತಲಿದ್ದರು.

ಒಮ್ಮೆ ನನ್ನ ಆತ್ಮೀಯ ಗೆಳೆಯರಾದ ಮಹಾವಿದ್ಯಾವಿನಯ ಸಂಪನ್ನರಾದ ಅನೇಕ ಗ್ರಂಥ ಕರ್ತೃಗಳಾದ ಶ್ರೀ ದೇಶಪಾಂಡೆ ಮನೋಹರರಾಯರ ಭವ್ಯ ಮಂದಿರದಲ್ಲಿ ಈ ಪೂಜ್ಯ ಗುರುದೇವ ರಾನಡೆಯವರು ಇಳಿದುಕೊಂಡಿದ್ದರು. ಆಗ ನನ್ನ ಹಿರಿಯ ಆತ್ಮೀಯ ಹಿತೈಷಿ ಸ್ನೇಹಿತರಾದ ಶ್ರೀ ಅನ್ನದಾನಪ್ಪ ಶೆಟ್ಟಿಯವರು "ನಿಮ್ಮ ಕವಿತೆಯೊಂದನ್ನು ಪೂಜ್ಯ ರಾನಡೆಯವರೆದುರಿಗೆ ಓದಿ ತೋರಿಸಿರಿ" ಎಂದು ಹೇಳಿ ನನ್ನನ್ನು ಗುರುದೇವರಲ್ಲಿಗೆ ಕರೆದುಕೊಂಡು ಬಂದರು. ಆಗ ಗುರುದೇವರು ಧ್ಯಾನ ಮಂದಿರದೊಳಗಿಂದ ಹೊರಬಂದಿರಲಿಲ್ಲ. ಶ್ರೀ ಶೆಟ್ಟಿಯವರೂ ನಾನು ಸ್ವಲ್ಪ ಕಾಲ ಶ್ರೀ ಮನೋಹರರಾಯರ ಜೊತೆಗೆ ಮಾತಾಡುತ್ತ ಕುಳಿತೆವು. ಐದು ಹತ್ತು ನಿಮಿಷಗಳು ಕಳೆದಿರಬಹುದು ಗುರುದೇವರು ಧ್ಯಾನಮಂದಿರದೊಳಗಿಂದ ಹೊರಬಂದ ಕೂಡಲೇ

ನನ್ನ ಕಡೆ ದೃಷ್ಟಿ ಬೀರಿದರು. ನಾವೀರ್ವರೂ ನಮಸ್ಕರಿಸುತ್ತಿದ್ದಂತೆಯೇ ನನ್ನನ್ನು ಕುರಿತು "ಇವರಾರು ? " ಎಂದು ಶ್ರೀ ಶೆಟ್ಟಿಯವರಿಗೆ ಗುರುದೇವರು ಕೇಳಿದರು. ಆಗ ಶ್ರೀ ಶೆಟ್ಟಿಯವರೂ ನನ್ನ ಪರಿಚಯವನ್ನು ಮಾಡಿಕೊಟ್ಟರು.

ಕೂಡಲೇ ಗುರುದೇವರು "ಆಗಲಿ" ಎಂದು ಶ್ರೀ ಶೆಟ್ಟಿಯವರಿಗೆ ಉತ್ತರಿಸುತ್ತ ನನಗೆ ಕವಿತೆಯನ್ನು ಓದುವಂತೆ ಆಜ್ಞಾಪಿಸಿದರು. ಆಗ ನಾನು ತುಂಬಾ ಹರ್ಷ ಹೃದಯನಾಗಿ 'ವಿಶ್ವ ಜಯದ್ರಥ ಚಕ್ರ" ಎಂಬೀ ನವವೃತ್ತ ಭಾವಗೀತೆಯನ್ನು ಓದಲಾರಂಭಿಸಿದೆ. ಪೂಜ್ಯರು ಲಕ್ಷ್ಯಗೊಟ್ಟು ಕೇಳುತ್ತಿದ್ದಂತೆಯೆ ಆಶ್ಚರ್ಯಚಕಿತರಾಗಿ, ನನ್ನ ಮೈಮೇಲೆ ತಮ್ಮ ಹಸ್ತಗಳನ್ನಿರಿಸಿ " ಈ ಕವಿತೆ ರಹಸ್ಯ ಪೂರ್ಣವಾಗಿದ್ದು, ತತ್ವಾತ್ಮಕವೆನಿಸಿದೆ. ಹಾಗೆಯೇ ಬಹು ಸ್ವಾರಸ್ಯವಾಗಿದೆ; ವಿಚಾರಪುತವಾಗಿದೆ." ಎನ್ನುತ್ತ ಶ್ರೀ ಮನೋಹರರಾಯರನ್ನು ಕುರಿತು "ಬಗಾ ಮನೋಹರಪಂತ" ಎಂದು ತಮ್ಮ ದೇವಹೃದಯದ ಉದ್ಗಾರವಾಣಿಯನ್ನು ಹೇಳಿದರು. ಹೊರಗೆಡಹಿದರು.

ಮತ್ತೆ ನನಗೆ ಗುರುದೇವರು: "ನಿಮ್ಮ ಕವಿತೆಯಲ್ಲಿ ಸಂಸ್ಕೃತ ಶಬ್ದಗಳು ಬಂದಿವೆ! ನಿಮಗೆ ಸಂಸ್ಕೃತ ಜ್ಞಾನ ಚೆನ್ನಾಗಿರಲಿಕ್ಕೆ ಬೇಕು. "ಎಂದರು-ಗುರುದೇವ ರಾನಡೆಯವರ ಈ ಬಗೆಯ ಹರ್ಷನುಡಿಯನ್ನು ಕೇಳಿದ ನಾನು ಮೂಕ ವಿಸ್ಮಿತನಾಗಿ ಕುಳಿತಿದ್ದೆ. ಆಗ ಮತ್ತೆ ನನಗೆ ಗುರುದೇವರು – "ನೀವು ಒಮ್ಮೆ ನಿಂಬಾಳಕ್ಕೆ ಬರ್ರಿ," ಹಾಗೆಯೇ ಶ್ರೀ ಶೆಟ್ರರಿಗೆ ಹೇಳಿದರು. ಇವರನ್ನು ಒಮ್ಮೆ ನಿಂಬಾಳಕ್ಕೆ ಕರೆದುಕೊಂಡು ಬರ್ರಿ" ಎಂದು ನನ್ನ ಕಡೆಗೆ ಬೆರಳು ಮಾಡಿ ತೋರಿಸಿ ಸೂಚಿಸಿದರು. ತುಂಬು ದೃಷ್ಟಿಯಿಂದ ನನ್ನನ್ನು ಗುರುದೇವರು ಕಾಣುತ್ತಿದ್ದಂತೆಯೆ, ಕರಾಂಜಲಿ ಬದ್ಧನಾಗಿ ನಿಂತಿದ್ದ ನನ್ನ ಹೃದಯ, ಕೃತಾರ್ಥತೆಯ ಕೋಟಿ ನಮನಗಳನ್ನು ಸಲ್ಲಿಸುತ್ತಲಿದ್ದಿತು.

ಗುರುದೇವ ರಾನಡೆಯವರ ಮುಂದೆ ಓದಲಾದ ನನ್ನ ಕವಿತೆ "ವಿಶ್ವಜಯದ್ರಥ ಚಕ್ರ" ಇಲ್ಲಿ ಓದುಗರ ಅವಗಾಹನೆಗಾಗಿ ಕೊಡಲಾಗಿದೆ.

## ವಿಶ್ವಜಯದ್ರಥ ಚಕ್ರ

ವಿಶ್ವೇಶನೇ ಸಾರಥಿಯಾಗಿ ಕುಳಿತಿರೆ ಜಯಿಸಲರಿಯದ ಸಲೆ
ವಿಶ್ವರಥ ಚಕ್ರಸಾಗಿ ಬರುವುದು ನಿರುತ ಯುಗ ಯುಗಗಳಿಂದಲೆ
ಪಾಪ-ಪುಣ್ಯವೆಂಬುವುಭಯ ತೇಜಿಯಿಂ ಕೂಡಿರೆ ಜಯದ್ರಥವದು
ಕೋಪ ತಾಪದಜ್ಞಾನ ರಣಕೆ ಸಾಗಿ ನಿಸರ್ಗಬಯಲಲಿ ಬರುವುದು
ಎನಿತೊ ಕಾಲಮಿತಿ-ಯೊಂದಿರದಲೊಂದೇ ಸಮನೆ ಭರದಿಂ ಬಿಡದದು
ಜನ ಜನಿತಮಾಗಿ ಜೀವಕೋಟಿಯ ನಿರಿಸಿಕೊಂಡು ಬರುತಲಿಹುದು
ವಿಶ್ವರಥದೊಳಿಹ ವರಜೀವಕೋಟಿಗೆ ಕಾಲವೈರಿಗೆ ನಿತ್ಯದಿ
ವಿಶ್ವದೊಳ್ ಹೋರಾಟ ನಡೆದಿದೆ ಘನ-ಘೋರ ಕಾಳಗ ತುಂಬಿದೆ



ಪರಮ ಸಾರಥಿ ವಿಶ್ವನಾಥನೇ ತವ ಸೇನೆ ಅಗಣಿತಮಾಗಿರೆ
ನಿರುತವದರೊಳ್ ಮನ ಮುನಿಗಳ್ ಮೇಣ್ ಪೂತಾತ್ಮರ್ ಮಿಗೆ ಪುರಾತನರ್
ಹರಿಶರಣರ್ ಸುಜ್ಞಾನಿಗಳ್ ಯೋಗಿಗಳ್ ತ್ಯಾಗಿಗಳ್ ಭೋಗಿಗಳನೇಕರ್
ವರವಿಶ್ವರಥ ಚಕ್ರದೊಳ್ ಹೋರಾಡಿ ಮೃತ್ಯುವಂ ಜಯಿಸಿದರ್
ಆದಡುಂ ಎನಿತು ಜನನ-ಮರಣಂಗಳು ! ಎನಿತು ರಕ್ತಪ್ರವಾಹ !
ಮೋದವೇ ಪ್ರಭು ನಿನಗೆ! ಸಾಕುಮಾಡು ನಿನ್ನೀ ವಿನೋದದೂಹೆ !
ಲೋಕ ರಕ್ಷಕ ಬಿಡದೆ ಸಾರಥಿಯೆನಿಪ ವಿಶ್ವೇಶನೀಕ್ಷಿಪನು !
ಐಕ್ಯಗೋಸುಗ ಈ ಪ್ರಲಯ ಕಾಳಗ ನಿಲಿಪನೆಂದೊ ನಾಕಾಂಬೆನು !
ರವಿ-ಚಂದ್ರರು ಕಂಗಳಾಗೆ ನೀ ನಕ್ಷತ್ರಸುಮಗಳಿಂದೆ ರಾಜಿಸುವೆ !
ತವೆ ನೀಲ ಗಗನಾಂಗಮೆನೆ ಮೂಲೋಕ ತುಂಬಿ ಬೆಳಗುವೆ ಗುರುಲಿಂಗವೆ !
ಪ್ರಭುವೆ ನಿನ್ನ ಲೀಲಾವಿಲಾಸವನಂತ ಜೀವಾತ್ಮ ಕಲ್ಯಾಣವೆ !
ಪ್ರಭುದೇವ ! ನಡೆಯಿಸೈ ನೀ ಅನ್ಮೃತತ್ವದೆಡೆಗೆ ತವ ವಿಶ್ವರಥ ಚಕ್ರವ!
ಜಯ ಜಯ ಮಹಾಲಿಂಗವೆ ಜಯವಾಗಲಿ ವಿಶ್ವಜಯದ್ರಥ ಚಕ್ರದಲ್ಲಿ!
ಜಯ ಮಂಗಲ ಸ್ವರ್ಣ ಜ್ಯೋತಿಯುದಯವಾಗಲಿ ಸತತ ಸರ್ವತ್ರದಲ್ಲಿ!

ಟೀ:- ಪೂಜ್ಯ ಶ್ರೀ ರಾನಡೆಯವರ "ಕನ್ನಡ ಸಂತರ ಪರಮಾರ್ಥಪಥ" ಎಂಬ ಗ್ರಂಥವು ಆಧ್ಯಾತ್ಮ ಮಾರ್ಗದ ಉತ್ಕೃಷ್ಟ ಉಜ್ವಲ ಕೃತಿರತ್ನ. ಈ ಪವಿತ್ರ ಗ್ರಂಥದಲ್ಲಿ ಶ್ರೀ ರಾನಡೆಯವರು "ಅನುಭವ ಮಂಟಪದಲ್ಲಿ" ಶಿವಶರಣರು ಭಗವನ್ನಾಮ ಸಂಕೀರ್ತನದಿಂದ ಆಕಾಶವನ್ನೆಲ್ಲ ತುಂಬಲು ನೆರೆಯುತ್ತಿದ್ದರು. ಶಿವಾನುಭವಿಗಳು ಪರಾತ್ಪರರ ದರ್ಶನಾನುಭವಿಗಳನ್ನು, ತಿಳಿದುಕೊಳ್ಳಲು, ಚರ್ಚಿಸಲು ಕೂಡುತ್ತಿದ್ದರು. ಈ ಅನುಭವ ಮಂಟಪದ ಮುಖ್ಯ ಗುರಿಗಳಲ್ಲಿ ಧರ್ಮವನ್ನು ಸರ್ವರಿಗೂ ನಿಲುಕುವಂತೆ ಮಾಡಿ, ಮತಾಚಾರಗಳ ಬಂಧನದಿಂದ ಭ್ರಾಮಕ ಕಲ್ಪನೆಗಳಿಂದ ಬಿಡುಗಡೆ ಮಾಡುವುದು ಒಂದಾಗಿತ್ತು. ಈ ಧರ್ಮವು ಎಲ್ಲ ಜಾತಿಮತ, ಲಿಂಗಗಳ ಭೇದವನ್ನು ಹರಿದು ಹಾಕಿತು. ಪ್ರತಿಯೊಬ್ಬನಿಗೂ ಅವನ ಕಾಯಕವೇ ಅವನನ್ನು ಮುಕ್ತಿಗೆ ಕರೆದೊಯ್ಯುವದು. ವೀರಶೈವರಲ್ಲಿ ಪರಸ್ಪರ ಪ್ರೇಮವೂ, ಸಾಮಾನ್ಯಧ್ಯೇಯವೂ ಮಹತ್ವದ ಐಕ್ಯಶಕ್ತಿಯಾಗಿತ್ತು. ಈ ಅಧ್ಯಾತ್ಮಿಕ ಭ್ರಾತೃತ್ವದಲ್ಲಿ ಭಾಗಿಯಾದ ಪ್ರತಿಯೊಬ್ಬನೂ ತನ್ನನ್ನು ತೀರ ಕಿರಿಯ ಸಹೋದರನೆಂದು ಭಾವಿಸುತ್ತಿದ್ದನು. ಶಿವಶರಣರಲ್ಲಿಯೇ ಅತ್ಯಂತ ಉಜ್ವಲ ರತ್ನಪ್ರಾಯರಾದ ಬಸವಣ್ಣನವರೇ ಸ್ವತಃ ತನಗಿಂತ ಕಿರಿಯರಿಲ್ಲ, ಶಿವಶರಣರಿಗಿಂತ ಹಿರಿಯರಿಲ್ಲ, ಎಂದು ಹಾಡಿ ಕೊಂಡಿದ್ದಾರೆ. ಶಿವಶರಣದಾಸಾನು ದಾಸರೆಂದು ಹೇಳಿಕೊಂಡಿದ್ದಾರೆ. ಇಂಥ ಮಹಾನುಭಾವರಿಂದ ಕೂಡಿದ ಅನುಭವಮಂಟಪದಲ್ಲಿ ಶಿವಾನುಭವದ ಸೈದ್ಧಾಂತಿಕ, ಅನುಭಾವಿಕ, ವ್ಯಾವಹಾರಿಕ ವಿಚಾರಗಳು ಅತ್ಯುತ್ತಮ ಮಟ್ಟದಲ್ಲಿ ಚರ್ಚಿಸಲಾಗುತ್ತಿದ್ದವು" ಇತ್ಯಾದಿ ಅವರ ಅನುಭವ ಪೂರಿತ ವಿವರಣೆಗಳು ವಿಶ್ವಮಾನ್ಯವೆನಿಸುವುದು ಮಾತ್ರವಲ್ಲದೇ ಶ್ರೀ ರಾನಡೆಯವರು ದೇವಸಾಕ್ಷಾತ್ಕಾರವನ್ನು ಹೊಂದಿದ ದೈವೀಪುರುಷರೆಂಬುದನ್ನು ದೃಢಪಡಿಸುತ್ತವೆ.

## ಗುರುದೇವ ರಾನಡೆಯವರು ಒಂದು ನೆನಪು.

ಅಧ್ಯಾತ್ಮ ವಿಸ್ಮೃತಿಯೆ ಹೆಚ್ಚಿರಲು ಜನದಲ್ಲಿ
ಅಗಲಿ ಪೋದೆಯಾ ಪರಂಧಾಮನಲ್ಲಿ !
ಅನುಭಾವಿ ನೀನಾಗಿ ಕುಡಿಸುತಿರೆ ಅನುಭವಾಮೃತ !
ಇನ್ನಾರು ಗತಿ "ರಾನಡೆ ಗುರುದೇವ" ! ||೧||

ನಿನ್ನ ಜನನಕಾಶ್ರಯವಾಯ್ತು "ಜಮಖಂಡಿ' ಸ್ಥಲ
ನಿಜ ಸಮಾಧಿ ಬೆಳಕಾಯ್ತು "ನಿಂಬಾಳ"
ತವದೇಹ ತಳೆದು ಕಳೆದಿರಲು ವರುಷ ಎಪ್ಪತ್ತು !
ನಿನ್ನಗಲಿಕೆಯಾಯ್ತು ಜಗಕೆ ಕುತ್ತು ! ||೨||

ನೀ ಸಾಧಿಸಿದುದು ಅನುಭಾವ ಹಿಮಗಿರಿ ಶಿಖರ !
ಸಾಧನೆಯ ಸಿದ್ಧಿಯಲಿ ಏರಿನಿಂತೆ !
ವಿಶ್ವಕ್ಕೆ ಭಾರತೀಯ ತತ್ತ್ವಜ್ಞಾನ ಬೆಳಕು ತೋರಿ !
ಗುರುದೇವ ನೀ ಬೆಳಕಾಗಿ ನಿಂತೆ ||೩||

ಈ ಮೊದಲು ನೀನೊಮ್ಮೆ "ಅಥಣಿ" ಪುರಕಾಗಮಿಸಿರೆ
ಎನ್ನಿಂದೆ ಪೇಳಿಸಿದೆ ಕವನಗಾನ !
ಗುರುದೇವ ನೀಕೇಳಿ ತೆಗೆದೆ ಹರ್ಷೋದ್ಗಾರ !
ಎನಿತೋ ! ತವವಿಶ್ವಾತ್ಮದೃಷ್ಟಿ ! ಜ್ಞಾನ ! ||೪||

ನೀಗೆಯ್ದೆ ಮಹಾ "ಉಪನಿಷದ್ರಹಸ್ಯ" ಕೃತಿದಾನ !
ಕಾರುಣ್ಯ ಸಿಂಧು ! ಸದ್ಧರ್ಮ ಜ್ಯೋತಿ !
ತವ ಜೀವನದ ರಂಗದಲಿ ನಿತ್ಯ ಪರಮಾತ್ಮಧ್ಯಾನ !
ಚಿಂತನದಿ ನಿನ್ನಾತ್ಮವಾಯ್ತು ಅಮರ ||೫||

ನಿನ್ನಗಲಿಕೆಯಿಂದಾಗಿ ಬಿಡದೆ ತವ ಶಿಷ್ಯಕೋಟಿ !
ಮುಳುಗೇಳುತಿರೆ ದಃಖಸಾಗರದಲ್ಲಿ !
ಇಂದು ಜಡದೇಹ ನುಸುಳಿಪೋದಡುಂ ಜೀವಜ್ಯೋತಿ !
ಭುವಿಗೆ ಬೆಳಕಾಗಿದೆ ಆತ್ಮ ಜ್ಯೋತಿ ||೬||

ಟೀ:- ಸಂತ ಶ್ರೇಷ್ಠ ತುಕಾರಾಮರು ವೈಕುಂಠಕ್ಕೆ ಹೋಗುವಾಗ:- ಆಮಿ ಜಾತೋ ಆಮುಚೆಗಾವಾಲಾ। ಆಮುಚೆ ರಾಮ ರಾಮಘ್ಯಾವಾ" ಮರಾಠಿ ಭಾಷೆಯಲ್ಲಿ ಅಭಂಗವಿದು ಎಂದು ಭಕ್ತ ಸ್ತೋಮಕ್ಕೆ ತಮ್ಮ ಕೊನೆಯ ನಮಸ್ಕಾರಗಳನ್ನು ಹೇಳಿದ ಹಾಗೆಯೇ-ಗುರುದೇವ ರಾನಡೆಯವರೂ ಕೂಡ ತಮ್ಮ ಭಕ್ತತತಿಗೆ ಕೊನೆಯ ಪ್ರಣಾಮಗಳನ್ನು ಅರ್ಪಿಸುತ್ತ ಪರಂಧಾಮವನ್ನೈದಿದರೇನೋ ಎಂಬಂತೆ ಭಾಸವಾಗುತ್ತಿದೆ ಇ!

# ಕೇಂದ್ರ ಸರ್ಕಾರದ ಆಯ-ವ್ಯಯ ಪಟ್ಟಿ ಸಿದ್ಧಗೊಳ್ಳುವಬಗ್ಗೆ ಒಂದು ರೋಚಕ ಕ್ರಿಯೆ

ಡಾ. ಶೌಕತ್ ಅಝೀಮ್, ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಮಲಾಪುರ-೫೮೩ ೨೨೧.

**ಪ್ರವೇಶ :**

ಸರ್ಕಾರವೊಂದರ ವಾರ್ಷಿಕ ಹಣಕಾಸು ವ್ಯವಹಾರದ ಒಂದು ವಿವರವಾದ ವರದಿಯೇ ಆಯ-ವ್ಯಯಪಟ್ಟಿ ಇದನ್ನು ಮುಂಗಡ ಪತ್ರ ಅಥವಾ ಬಜೆಟ್ ಎಂದು ಕರೆಯುವುದು ವಾಡಿಕೆ. ಆಯ-ವ್ಯಯ ಪಟ್ಟಿ ಎಂಬ ಹೆಸರೇ ಸೂಚಿಸುವಂತೆ, ಅದರಲ್ಲಿ 'ಆಯ' ಮತ್ತು 'ವ್ಯಯ'ಗಳ ವಿವರವಿರುತ್ತದೆ. ಈ ವಿವರಗಳು ಮೂರು ವರ್ಷದ ವಿವರಗಳನ್ನೂ ಒಳಗೊಂಡಿರುತ್ತವೆ.

೧. ಹಿಂದಿನ ವರ್ಷದ ಆಯ-ವ್ಯಯಗಳ ನಿಜ ಅಂಕಿ-ಸಂಖ್ಯೆಗಳು : ೧೯೯೪-೯೫
೨. ಪ್ರಸ್ತುತ ವರ್ಷದ ಆಯ-ವ್ಯಯಗಳ ಅಂದಾಜು ಅಂಕಿ-ಸಂಖ್ಯೆಗಳು: ೧೯೯೫-೯೬
೩. ಪ್ರಸ್ತುತ ವರ್ಷದ ಆಯ-ವ್ಯಯಗಳ ಪರಿಷ್ಕೃತ ಅಂಕಿ-ಸಂಖ್ಯೆಗಳು: ೧೯೯೫-೯೬
೪. ಮುಂದಿನ ವರ್ಷದ ಆಯ-ವ್ಯಯಗಳ ಅಂದಾಜುಅಂಕಿ-ಸಂಖ್ಯೆಗಳು: ೧೯೯೬-೯೭

ಆಯ-ವ್ಯಯ ಪಟ್ಟಿ ಸಿದ್ಧತೆ, ಹಣಕಾಸು ಸಚಿವರಿಂದ ಅದರ ಮಂಡನೆ, ಸಂಸತ್-ನಲ್ಲಿ ಅದರ ಚರ್ಚೆ ಮತ್ತು ಕೊನೆಯಲ್ಲಿ ಅದು ಶಾಸನವಾಗಿ ರೂಪು ತಳೆಯುವ ಬಗೆ. ಇವೆಲ್ಲ ಒಂದು ವಿದ್ಯುತ್ ಕ್ರಿಯೆಯಂತೆ ನಡೆಯುತ್ತವೆ. ಪ್ರತಿವರ್ಷವು ಇದು ನಿಯಮಿತವಾಗಿ ನಡೆಯುತ್ತದೆ. ಈ ಆಯ-ವ್ಯಯಪಟ್ಟಿಯನ್ನು ಭಾರತದಲ್ಲಿ ಪ್ರತಿವರ್ಷ ಫೆಬ್ರವರಿ ತಿಂಗಳ ಕೊನೆಯದಿನದಂದು ಸಂಸತ್‌ನಲ್ಲಿ ಹಣ ಕಾಸುಸಚಿವರು ಮಂಡಿಸುತ್ತಾರೆ. ಮಾರ್ಚ್ ತಿಂಗಳಲ್ಲಿ ಬಜೆಟ್ ಬಗ್ಗೆ ಚರ್ಚೆ ನಡೆಯುತ್ತದೆ. ಏಪ್ರಿಲ್ ಮೊದಲ ದಿನ-ದಂದು ಶಾಸನ ರೂಪುತಳೆದು ಜಾರಿಗೆ ಬರುತ್ತದೆ.

ಆಯ-ವ್ಯಯ ಪಟ್ಟಿಯಲ್ಲಿ ಆರ್ಥಿಕತೆಯ ಪ್ರಸಕ್ತ ಸ್ಥಿತಿ-ಗತಿಗಳ ಚಿತ್ರವಿರುತ್ತದೆ. ಇದೊಂದು ಆರ್ಥಿಕ ವಿಷಯದ ಸಂಗತಿ. ಆದರೆ ಇದನ್ನು ರಚಿಸುವ ಹಾಗೂ ಅದಕ್ಕೆ ಅನುಮೋದನೆ ನೀಡುವ ಅಧಿಕಾರ ಸರ್ಕಾರಕ್ಕಿರುವುದರಿಂದ ಅದರಲ್ಲಿ ರಾಜಕೀಯ ಧ್ಯೇಯ-ಧೋರಣೆಗಳು ಅಂತರ್ಗತವಾಗಿರುತ್ತವೆ.

"ಬಜೆಟ್ ಅಥವಾ ಆಯ-ವ್ಯಯ ಪಟ್ಟಿಯು ಆರ್ಥಿಕ ವಿಷಯಕ್ಕೆ ಸಂಬಂಧಿಸಿದ ರಾಜಕೀಯ ಪಟ್ಟಿಯಾಗಿದೆ." ಬಜೆಟ್ ಕೇವಲ ಹಣಕಾಸು, ತೆರಿಗೆ, ವೆಚ್ಚ, ಕೊರತೆ ಮುಂತಾದ ವಿಷಯಗಳನ್ನು ಒಳಗೊಂಡ ಒಂದು ಅಂಕಿ-ಸಂಖ್ಯೆಯ ಗೊಂಡಾರಣ್ಯವಲ್ಲ. ಬಜೆಟ್‌ನಲ್ಲಿ ಸರ್ಕಾರವೊಂದನ್ನು ನಡೆಸುವ ರಾಜಕೀಯ ಪಕ್ಷದ ಧ್ಯೇಯ-ಧೋರಣೆಗಳು ಸೈದ್ಧಾಂತಿಕ ದಿಕ್ಕು-ದಿಶೆಗಳು ಅಂತರ್ಗತವಾಗಿರುತ್ತವೆ. ಇಡೀ ದೇಶದ ಜನತೆಯ

ಆಶೋತ್ತರಗಳನ್ನು ಬಜೆಟ್ ಪ್ರತಿಬಿಂಬಿಸುತ್ತದೆ. ಈ ಪ್ರಬಂಧದಲ್ಲಿ ಬಜೆಟ್‌ಗೆ ಸಂಬಂಧಿಸಿದ ಆರ್ಥಿಕ-ಹಣಕಾಸು-ರಾಜಕೀಯ ವಿವರ-ವಿವಾದಗಳನ್ನು ಬದಿಗಿಟ್ಟು ಕೇವಲ ಬಜೆಟ್ ಸಿದ್ಧವಾಗುವ ಬಗೆ, ಅದು ಮುದ್ರಣಗೊಳ್ಳುವ ರೀತಿ, ಅದರ ಸಿದ್ಧತೆಯ ಹಿಂದೆ ಕೆಲಸ ಮಾಡುವ ವ್ಯಕ್ತಿಗಳು ಮುಂತಾದುವನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

ಆಯ-ವ್ಯಯ ಪಟ್ಟಿಯನ್ನು ಸಿದ್ಧಪಡಿಸುವ ಪ್ರಕ್ರಿಯೆ ಕೇಂದ್ರ ಸರ್ಕಾರದ ಹಣಕಾಸು ಸಚಿವಾಲಯದ ಒಂದು ಗುರುತರವಾದ ಕಾರ್ಯವಾಗಿದೆ. ಬಜೆಟ್‌ನ ಸಿದ್ಧತೆಯು ಕಟ್ಟುನಿಟ್ಟಾದ ಗುಟ್ಟಿನಲ್ಲಿ ನಡೆಯುವ ಕಾರ್ಯವಾಗಿದೆ. ಬಜೆಟ್‌ನ ಸಿದ್ಧತೆಯ ಕಾರ್ಯವು ಪ್ರತಿವರ್ಷ ಅಕ್ಟೋಬರ್‌ನಲ್ಲಿ ಪ್ರಾರಂಭವಾಗುತ್ತದೆ. ಇದು ಮೂರು ಹಂತಗಳನ್ನು ಒಳಗೊಂಡಿರುತ್ತದೆ.

### ೧. ಮೊದಲನೆಯ ಹಂತ :

ಈ ಹಂತದಲ್ಲಿ ಹಣಕಾಸು ಸಚಿವಾಲಯದ ವೆಚ್ಚ ವ್ಯವಹಾರದ ಕಾರ್ಯದರ್ಶಿಯು ಸಚಿವಾಲಯದ ಆರ್ಥಿಕ ಸಲಹೆಗಾರರೊಡನೆ ಚರ್ಚೆ ನಡೆಸಿ ಪ್ರಸಕ್ತ ವರ್ಷದ ವೆಚ್ಚವನ್ನು ಪರಿಷ್ಕರಿಸಲಾಗುತ್ತದೆ ಹಾಗೂ ಮುಂದಿನ ವರ್ಷದ ನಿರೀಕ್ಷಿಸಿದ ಯೋಜನಾ ಹಾಗೂ ಯೋಜನೇತರ ವೆಚ್ಚಗಳ ರೂಪುರೇಷೆಗಳನ್ನು ತಯಾರಿಸಲಾಗುತ್ತದೆ.

### ೨. ಎರಡನೇ ಹಂತ :

ಈ ಹಂತದಲ್ಲಿ ಸಚಿವಾಲಯವು ಸರ್ಕಾರದ ಎಲ್ಲಾ ಇಲಾಖೆಗಳಿಂದ ವೆಚ್ಚದ ಬೇಡಿಕೆಗಳನ್ನು ಸ್ವೀಕರಿಸುತ್ತದೆ. ಹೀಗೆ ಪಡೆದುಕೊಂಡ ವೆಚ್ಚಗಳ ಬೇಡಿಕೆಗಳನ್ನೆಲ್ಲ ಪರಿಗಣಿಸಿ ಬಜೆಟ್ ಸಿದ್ಧಪಡಿಸುತ್ತಾರೆ. ಈ ಹಂತದಲ್ಲಿ ಕೇಂದ್ರಸರ್ಕಾರದ ತೆರಿಗೆ ಇಲಾಖೆಗಳು ತಾವು ಗುರುತಿಸಿರುವ ಆದಾಯ ತೆರಿಗೆ, ಅಬ್ಕಾರಿಸುಂಕ, ಕಸ್ಟಮ್ಸ್‌ಸುಂಕ ಮುಂತಾದ ತೆರಿಗೆಗಳ ನಿಯಮ ಪ್ರಮಾಣ ಹಾಗೂ ಇತರೆ ತಿದ್ದುಪಡಿಗಳ ಬಗ್ಗೆ ಸಲಹೆ ನೀಡುತ್ತದೆ.

### ಮೂರನೇ ಹಂತ :

ಮೂರನೇ ಹಂತದಲ್ಲಿ ಹಣಕಾಸು ಸಚಿವರು ದೇಶದ ಪ್ರಸಿದ್ಧ ಅರ್ಥಶಾಸ್ತ್ರಜ್ಞರು, ಉದ್ಯಮಪತಿಗಳು, ಕಾರ್ಮಿಕಸಂಘಟನೆಗಳು, ಮುಂತಾದ ವರ್ಗ-ಸಂಸ್ಥೆಗಳ ಬಜೆಟ್ ಕುರಿತು ಸಮಾಲೋಚನೆ ನಡೆಸುತ್ತಾರೆ. ಅಲ್ಲಿ ವ್ಯಕ್ತವಾದ ಸಲಹೆ-ಸೂಚನೆಗಳನ್ನು ಸ್ವೀಕರಿಸುತ್ತಾರೆ.

ಹೀಗೆ ಬಜೆಟ್‌ಸಿದ್ಧತೆಯ ಪೂರ್ವ ತಯಾರಿ ಮೂರು ಹಂತಗಳಲ್ಲಿ ಮುಗಿಯುತ್ತದೆ. ಈ ಹಂತಗಳಲ್ಲಿ ಕೇವಲ ಅಂಕಿ-ಸಂಖ್ಯೆಗಳ ಸಂಗ್ರಹ ನಡೆಯುತ್ತದೆ. ಆರ್ಥಿಕ ಹಾಗೂ ಹಣಕಾಸು ವಿಷಯಗಳಿಗೆ ಮಾತ್ರ ಈ ಪೂರ್ವಸಿದ್ಧತೆಯಲ್ಲಿ ಪ್ರಾಮುಖ್ಯತೆ ದೊರೆಯುತ್ತದೆ



### ಬಜೆಟ್‌ಗೆ ರಾಜಕೀಯ ಉಪಚಾರ :

ಈ ಮೊದಲೇ ತಿಳಿಸಿರುವಂತೆ ಬಜೆಟ್ ಕೇವಲ ಆರ್ಥಿಕ ವಿಷಯಕ್ಕೆ ಸಂಬಂಧಿಸಿದ್ದ ಕ್ರಿಯೆಯಲ್ಲ. ಅದೊಂದು ರಾಜಕೀಯ ಪತ್ರ. ಬಜೆಟ್‌ನ ಪೂರ್ವ ತಯಾರಿ ನಡೆದ ಮೇಲೆ ಹಣಕಾಸು ಸಚಿವರು ಸರ್ಕಾರದ ಪ್ರಧಾನ ಆರ್ಥಿಕ ಸಲಹೆಗಾರರು ಹಾಗೂ ಉಳಿದ ಕಾರ್ಯದರ್ಶಿಗಳು ಎಲ್ಲ ಒಟ್ಟಿಗೆ ಬಜೆಟ್ ಬಗ್ಗೆ ಕೂಲಂಕಷ ಚರ್ಚೆನಡೆಸುತ್ತಾರೆ. ಜನರ ಆಶೋತ್ತರಗಳನ್ನು, ನಿರೀಕ್ಷೆಗಳನ್ನು ವಿವಿಧ ವರ್ಗಗಳ ಹಕ್ಕೊತ್ತಾಯಗಳನ್ನು ಹಾಗೂ ಸರ್ಕಾರದ ಧ್ಯೇಯ-ಧೋರಣೆಗಳನ್ನು ಬಜೆಟ್‌ನಲ್ಲಿ ಅಂತರ್ಗತಗೊಳಿಸುವ ಕೆಲಸ ಇಲ್ಲಿ ನಡೆಯುತ್ತದೆ. ಸರ್ಕಾರ ನಡೆಸುತ್ತಿರುವ ರಾಜಕೀಯ ಪಕ್ಷದ ವಿಚಾರ ಪ್ರಣಾಳಿಕೆಯು ಈ ಸಂದರ್ಭದಲ್ಲಿ ಬಜೆಟ್‌ನೊಳಗೆ ಪ್ರವೇಶಿಸುತ್ತದೆ. ಒಟ್ಟಾರೆ ಬಜೆಟ್‌ಗೆ ರಾಜಕೀಯ ಉಪಚಾರ ನೀಡಲಾಗುತ್ತದೆ. ಇಲ್ಲಿಗೆ ಬಜೆಟ್‌ನ ಸಿದ್ಧತೆ ಮುಗಿಯುತ್ತದೆ.

### ಬಜೆಟ್ ಸಂಪುಟಗಳ ಮುದ್ರಣ :

ಹಣಕಾಸು ಸಚಿವಾಲಯದ ಸುಪರ್ದಿನಲ್ಲಿ ಒಂದು ಮುದ್ರಣಾಲಯವಿದೆ. ಅಲ್ಲಿ ಬಜೆಟ್‌ನಲ್ಲಿ ಎಲ್ಲಾ ಸಂಪುಟಗಳ ಮುದ್ರಣ ನಡೆಯುತ್ತದೆ. ಬಜೆಟ್‌ನ ಮುದ್ರಣವು ಅತ್ಯಂತ ಜವಾಬ್ದಾರಿಯುತವಾದ ಹಾಗೂ ಗುರುತರವಾದ ಕೆಲಸವಾಗಿದೆ. ಬಜೆಟ್ ಹತ್ತು ಸಂಪುಟಗಳನ್ನು ಹೊಂದಿರುತ್ತದೆ. ಇವುಗಳಲ್ಲಿ ನಾಲ್ಕು ಸಂಪುಟಗಳು ಅತಿ ಸೂಕ್ಷ್ಮವೆಂದು ಉಳಿದ ಆರು ಸೂಕ್ಷ್ಮವಲ್ಲದ ಸಂಪುಟಗಳಲ್ಲವೆಂದೂ ವರ್ಗೀಕರಿಸಲಾಗಿದೆ. ಬಜೆಟ್‌ನ ಸಂಪುಟಗಳ ಮುದ್ರಣಕಾರ್ಯವು ಇಂಟಲಿಜೆನ್ಸ್ ಬ್ಯೂರೋ ಹಾಗೂ ಉನ್ನತ ಪೊಲೀಸು ಅಧಿಕಾರಿಗಳ ಸರ್ಪಕಾವಲಿನಲ್ಲಿ ನಡೆಯುತ್ತದೆ.

ಮೊದಲು ಸೂಕ್ಷ್ಮವಲ್ಲದ ಆರು ಸಂಪುಟಗಳ ಮುದ್ರಣ ಕಾರ್ಯ ನಡೆಯುತ್ತದೆ. ಇದನ್ನು ಒಂದುವಾರದಲ್ಲಿ ಮುದ್ರಿಸಲಾಗುತ್ತದೆ. ಒಟ್ಟಾರೆ ಬಜೆಟ್‌ನ ೧೨,೫೦೦ ಪ್ರತಿಗಳನ್ನು ಮುದ್ರಿಸಲಾಗುತ್ತದೆ.

ಬಜೆಟ್‌ನ ಅತಿಸೂಕ್ಷ್ಮವೆನ್ನಲಾದ ನಾಲ್ಕು ಸಂಪುಟಗಳ ಮುದ್ರಣ ಕಾರ್ಯವು ಅತ್ಯಂತ ಗುಟ್ಟಿನಲ್ಲಿ ನಡೆಯುತ್ತದೆ. ಈ ಸಂಪುಟಗಳ ಮುದ್ರಣ ಕಾರ್ಯದಲ್ಲಿ ನಿರತರಾದ ಕೆಲಸಗಾರರು ಮುದ್ರಣ ಕಾರ್ಯ ಮುಗಿಯುವವರೆಗೆ ಅಂದರೆ ಏಳು ದಿನಗಳ ಕಾಲ ಮುದ್ರಣಾಲಯ ಬಿಟ್ಟು ಹೊರಗೆ ಹೋಗುವಂತಿಲ್ಲ. ವಿಶೇಷ ಸಂದರ್ಭಗಳನ್ನು ಬಿಟ್ಟು ಉಳಿದಂತೆ ಮುದ್ರಣಾಲಯದಿಂದ ಯಾರೂ ಯಾರಿಗೂ ಫೋನ್ ಮಾಡುವಂತಿಲ್ಲ. ಅನ್ಯ ವ್ಯಕ್ತಿಗಳಿಗೆ ಮುದ್ರಣಾಲಯದೊಳಗೆ ಪ್ರವೇಶ ಈ ಕಾಲಾವಧಿಯಲ್ಲಿ ನಿಷೇಧವಿರುತ್ತದೆ. ಮುದ್ರಣದ ಕಾರ್ಯದಲ್ಲಿ ನಿರತರಾದವರಿಗೆ ಆಹಾರ, ಮನರಂಜನೆ ಇತ್ಯಾದಿ ಸೌಲಭ್ಯಗಳು ಮುದ್ರಣಾಲಯದಲ್ಲಿ ಒದಗಿಸಲಾಗುತ್ತದೆ. ಈ ಅವಧಿಯಲ್ಲಿ ಕೆಲಸಗಾರರಿಗೆ ವಾಡಿಕೆಯ ಸಂಬಳಕ್ಕಿಂತ ಮೂರುಪಟ್ಟು ಅಧಿಕವಾಗಿ ನೀಡಲಾಗುತ್ತದೆ. ಬಜೆಟ್‌ಗೆ ಸಂಬಂಧಿಸಿದ ಯಾವುದೇ ಅಂಶವು ಹೊರಗೆ ನುಸುಳದಂತೆ ನೋಡಿಕೊಳ್ಳಲಾಗುತ್ತದೆ.

### ೧೯೯೬-೯೭ರ ಬಜೆಟ್ ರೂವಾರಿಗಳು :

ನವದೆಹಲಿಯಲ್ಲಿ ಕೇಂದ್ರ ಸರ್ಕಾರ ನೆಲೆಗೊಂಡಿರುವ ಆವರಣದಲ್ಲಿನ ಕಟ್ಟಡಗಳ ಸಮುಚ್ಚಯದ ಉತ್ತರಕಟ್ಟಡ (North Block)ದಲ್ಲಿ ಹಣಕಾಸು ಸಚಿವಾಲಯ ಕಾರ್ಯ ನಿರ್ವಹಿಸುತ್ತಿದೆ. ಈ ಕಟ್ಟಡ ಹಾಗೂ ಅದರಲ್ಲಿ ನೆಲೆಗೊಂಡಿರುವ ಹಣಕಾಸು ಸಚಿವಾಲಯವು ಅತಿಹೆಚ್ಚಿನ ಮಹತ್ವ ಪಡೆದುಕೊಂಡಿದೆ. ಹಣಕಾಸು ಸಚಿವಾಲಯದ ಕೆಲಸಮಾಡುವ ವ್ಯಕ್ತಿಗಳು ಅತಿ ಹೆಚ್ಚಿನಮಹತ್ವ ಪಡೆದಿದ್ದಾರೆ. ೧೯೯೬-೯೭ರ ಕೇಂದ್ರ ಬಜೆಟ್ ಸಿದ್ಧಪಡಿಸಿದ ಮುಖ್ಯ ವ್ಯಕ್ತಿಗಳ ವಿವರ ಹೀಗಿದೆ.

| | | |
|---|---|---|
| ೧. ಪಿ. ಚಿದಂಬರಮ್ | ಕ್ಯಾಬಿನೆಟ್ ಸಚಿವರು | ಹಣಕಾಸು ಸಚಿವಾಲಯ |
| ೨. ಅಲುವಾಲಿಯ ಮಾಂಟೆಕೆಸಿಂಗ್ | ಕಾರ್ಯದರ್ಶಿ | ಹಣಕಾಸು ಸಚಿವಾಲಯ (ಆರ್ಥಿಕ ವ್ಯವಹಾರ) |
| ೩. ಶಂಕರ್ ಎನ್. ಆಚಾರ್ಯ | ಪ್ರಧಾನ ಆರ್ಥಿಕ ಸಲಹೆಗಾರರು | ಹಣಕಾಸು ಸಚಿವಾಲಯ |
| ೪. ಎನ್. ಕೆ. ಸಿಂಗ್ | ಕಾರ್ಯದರ್ಶಿ (ವೆಚ್ಚ) | ಹಣಕಾಸು ಸಚಿವಾಲಯ |
| ೫. ಎಂ. ಆರ್. ಶಿವರಾಮನ್ | ಕಾರ್ಯದರ್ಶಿ (ರೆವಿನ್ಯೂ) | ಹಣಕಾಸು ಸಚಿವಾಲಯ |
| ೬. ಜೈರಾಮ್ ರಮೇಶ್ | ಸಲಹೆಗಾರರು | ಹಣಕಾಸು ಸಚಿವಾಲಯ |

ಕೇಂದ್ರ ಬಜೆಟ್ ೧೯೯೬-೯೭: ಒಂದು ಸಂಕ್ಷಿಪ್ತ ನೋಟ :

| | | ರೂ. (ಕೋಟಿಗಳಲ್ಲಿ) |
|---|---|---|
| 1. | ಕೇಂದ್ರದ ಒಟ್ಟು ಆಯ | 1,98,082 |
| 2. | ಕೇಂದ್ರದ ರೆವಿನ್ಯೂ ಆಯ | 1,30,345 |
| 3. | ಕೇಂದ್ರದ ಬಂಡವಾಳ ಆಯ | 67,737 |
| 4. | ಕೇಂದ್ರದ ಒಟ್ಟು ವೆಚ್ಚ | 2,04,660 |
| 5. | ಕೇಂದ್ರದ ರೆವಿನ್ಯೂ ವೆಚ್ಚ | 1,61,820 |
| 6. | ಕೇಂದ್ರದ ಬಂಡವಾಳ ವೆಚ್ಚ | 42,840 |
| 7. | ಕೇಂದ್ರದ ಯೋಜನಾ ವೆಚ್ಚ | 54,685 |
| 8. | ಕೇಂದ್ರದ ಯೋಜನೇತರ ವೆಚ್ಚ | 1,49,975 |
| 9. | ರೆವಿನ್ಯೂ ಕೊರತೆ(2-5) | 31,475 |
| 10. | ಬಜೆಟ್ ಕೊರತೆ (1-4) | 6,578 |
| 11. | ರಾಜಸ್ವ ಕೊರತೆ | 62,266 |
| 12. | ಪ್ರಾಥಮಿಕ ಕೊರತೆ | 2,266 |

ಆಭಾರ : ಈ ಲೇಖನವನ್ನು ಬರೆಯಲು ಹುರಿದುಂಬಿಸಿ ಸಹಕರಿಸಿದ ಡಾ. ಬಿ. ಶೇಷಾದ್ರಿ ಹಾಗೂ ಲಿಂಗರಾಜು ಅವರಿಗೆ ಮತ್ತು ಲೇಖನವನ್ನು ಚೆನ್ನಾಗಿ ತಿದ್ದಿ ಸಹಕರಿಸಿದ ಟಿ. ಆರ್. ಚಂದ್ರಶೇಖರ ಅವರಿಗೆ ನಾನು ಅಭಾರಿಯಾಗಿದ್ದೇನೆ.

ಸೌಜನ್ಯ : ಬಿತ್ತರ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೫೮೩ ೨೨೧.

ಚಿಂತನ.

## ಅಂತಿಮ ಸತ್ಯ ಸಾರುವ ಓಂಟೋಲಜಿ-

ಮಹಾಂತೇಶ ಮಲ್ಲನಗೌಡರ, ಉಪನ್ಯಾಸಕರು, ಬಾಲಕರ ಸರ್ಕಾರಿ ಕಾಲೇಜು, ಕೊಪ್ಪಳ.

ಓಂಟೋಲಜಿಯೆಂದರೆ ಜಗತ್ತಿನ ಅಂತಿಮ ಸತ್ಯ ಕಂಡುಕೊಳ್ಳುವ ವಿಜ್ಞಾನ. ಇದು ಆಧ್ಯಾತ್ಮ ಶಾಸ್ತ್ರದ ಅತ್ಯಂತ ಪ್ರಮುಖ ವಿಭಾಗ. ಅದರ ಮುಂದಿರುವ ಪ್ರಮುಖ ಸಮಸ್ಯೆಗಳು, ಅಂತಿಮ ಸತ್ಯ ಯಾವುದು ?ಅದು ಒಂದೋ, ಎರಡೋ ಅಥವಾ ಅನೇಕವೊ? ಅಂತಿಮ ಸತ್ಯ ಅನೇಕ, ಅದರೆ ಅವುಗಳ ನಡುವೆ ಪರಸ್ಪರ ಸಂಬಂಧ ಹೇಗೆ ? ಈಎಲ್ಲ ಸಮಸ್ಯೆಗಳು ಬೇರೆ ಬೇರೆ ವಿಧಾನದಲ್ಲಿ ಬೇರೆ ಬೇರೆ ತತ್ವಜ್ಞಾನಿಗಳಿಂದ ಪರಿಹರಿಸಲ್ಪಟ್ಟಿವೆ. ಇವುಗಳಲ್ಲಿ ಅತ್ಯಂತ ಪ್ರಮುಖವಾದವುಗಳೆಂದರೆ ಏಕವಾದ ದ್ವೈತವಾದ ಹಾಗೂ ಅನೇಕವಾದ.

**ಏಕವಾದ** ಸಿದ್ಧಾಂತದ ಪ್ರಕಾರ ಎಲ್ಲ ವಸ್ತುಗಳು ಹಾಗೂ ಜೀವಿಗಳ ಹಿಂದೆ ಒಂದೇ ಅಂತಿಮ ಸತ್ಯವಿದ್ದು ಎಲ್ಲವೂ ಅದರಿಂದಲೇ ಮಾಡಲ್ಪಟ್ಟಿರುತ್ತವೆ. ಈಸಿದ್ಧಾಂತ ಪ್ರತಿಪಾದಿಸಿರುವವರಲ್ಲಿ ಸ್ಪೀನೋಜ ಅವರು ಪ್ರಮುಖರು. ಅವರ ಅಭಿಪ್ರಾಯದಲ್ಲಿ ಇಲ್ಲಿ ಕಂಡು ಬರುವ ವಿವಿಧತೆ ಹಿಂದೆ ಒಂದೇ ಅಂತಿಮಸತ್ಯದ ತೋರಿಕೆ ಇದೆ. ಸರ್ವಕ್ಕೂ ಮೂಲವಾದ ದೇವರು ಏಕೈಕ ಸತ್ಯ. ಸತ್ಯ ಏಕವಾದರೆ ಮಾನವನ ದಿನನಿತ್ಯದ ಅನುಭವಕ್ಕೆ ಬರುವ ನಾನತ್ವ, ವೈವಿಧ್ಯತೆ, ಚಲನೆ, ಬದಲಾವಣೆಗಳು ಏನು ? ಈ ಪ್ರಶ್ನೆಗಳಗೆ ಸ್ಪೀನೋಜ ತನ್ನ "ಮೊಡ್" ಸಿದ್ಧಾಂತದಿಂದ ಉತ್ತರಿಸಲು ಪ್ರಯತ್ನಿಸುತ್ತಿದ್ದಾರೆ. ಪ್ರತ್ಯೇಕ ವಸ್ತುವನ್ನೇ "ಮೊಡ್" ಅನ್ನಬಹುದು. ಸಸ್ಯಗಳು, ಮಾನವರು, ಪ್ರಾಣಿಗಳು, ಕಲ್ಲು, ಕೋಲು, ಕಡ್ಡಿ ಮುಂತಾದವುಗಳು ಮೋಡ್ ಆಗಿವೆ. ಪ್ರತ್ಯೇಕ ವಸ್ತುವು ಸ್ವಯಂಸಿದ್ಧ ತತ್ವದೊಂದಿಗೆ ಬೇರ್ಪಡಿಸಲಾಗದ ಸಂಬಧವನ್ನು ಹೊಂದಿದೆ. ಅದು ಏಕಕಾಲದಲ್ಲಿ ಮಾನಸಿಕವೂ ಭೌತಿಕವೂ ಆಗಿದೆ. ಈ ಅರ್ಥದಲ್ಲಿಯೇ ಸ್ಪೀನೋಜ ಮನಸ್ಸನ್ನು ದೇಹದ ರೂಪವೆಂದು ದೇಹವನ್ನು ಮನಸ್ಸಿನ ಭೌತಿಕ ಪ್ರತಿರೂಪವೆಂದು ಅಂತಿಮಾರ್ಥದಲ್ಲಿ ಎರಡು ಪೂರಕ ಅಂಶಗಳೆಂದು ಪರಸ್ಪರ ವಿರುದ್ಧವಲ್ಲವೆಂದೂ ಹೇಳುತ್ತಾನೆ.

**ದ್ವೈತವಾದ ಅಥವಾ ಡ್ಯುಯಾಲಜಿ** ಸಿದ್ಧಾಂತದ ಪ್ರಕಾರ ಈಸೃಷ್ಟಿಯ ಹಿಂದೆ ಎರಡು ಅಂತಿಮ ಸತ್ಯಗಳಿವೆ. ಅವೇಭೌತಿಕ ಹಾಗೂ ಮಾನಸಿಕ. ಈ ಸಿದ್ಧಾಂತವನ್ನು ನಾವು ಡಕಾರ್ಟೆಯವರ ಸಿದ್ಧಾಂತಗಳಲ್ಲಿ ಕಂಡುಕೊಳ್ಳಬಹುದು. ನಮ್ಮ ಸುತ್ತಲೂ ಸಾಕಷ್ಟು ವಸ್ತುಗಳಿವೆ ಹಾಗೂ ಅವುಗಳ ಲಕ್ಷಣಗಳು ಜೀವಿಗಳಿಗಿಂತ ವಿಭಿನ್ನವಾಗಿವೆ. ಇದೇ ರೀತಿಯಾಗಿ ಜೀವಿಗಳು ವಸ್ತುವಿಗಿಂತ ಭಿನ್ನವಾದ ಲಕ್ಷಣಗಳನ್ನು ತೋರಿಸುತ್ತವೆ. ವಸ್ತುಗಳಿಗೆ ಸ್ಮೃತಿ, ಆಸೆ, ನಿರ್ಧಾರ, ಜ್ಞಾನ, ಗುರಿ ಹಾಗೂ ಚಲನೆ ಇರು

ವುದಿಲ್ಲ. ಇವೆಲ್ಲ ಜೀವಿಗಳ ಲಕ್ಷಣಗಳು. ನಮ್ಮಲ್ಲಿಯೇ ದೇಹದ ಲಕ್ಷಣಗಳು ಮನಸ್ಸಿನ ಲಕ್ಷಣಗಳಿಗಿಂತ ವಿಭಿನ್ನವಾಗಿವೆ. ಮಾನಸಿಕ ವಿಚಾರದಲ್ಲಿ ಯಾವುದೇ ಸಮಯ ಅಥವಾ ಸ್ಥಳದ ಬಂಧನವಿಲ್ಲ. ಆದರೆ ದೇಹಕ್ಕೆ ಬಂಧನವಿದೆ. ಮನಸ್ಸು ಚತುರವಿದ್ದರೆ ದೇಹ ಹಾಗಲ್ಲಾ. ಮನಸ್ಸನ್ನು ಕಾಣಲಾಗುವದಿಲ್ಲ. ಆದರೆ ದೇಹ ಕಾಣಿಸುತ್ತದೆ. ಮನಸ್ಸು ಹಾಗೂ ನಿಸರ್ಗದಲ್ಲಿಯ ನಮ್ಮ ಅನುಭವಗಳು ಎರಡು ತತ್ವವಿರುವುದನ್ನು ಖಚಿತಪಡಿಸುತ್ತದೆ.

ಮೂರನೆಯ ಸಿದ್ಧಾಂತವಾದ ಅನೇಕವಾದ ಅಥವಾ "ಪ್ಲೂರಲಿಜಮ" ಸಿದ್ಧಾಂತದ ಪ್ರಕಾರ ಈ ವ್ಯವಸ್ಥಿತ ಜಗತ್ತಿನ ಹಿಂದೆ ಅನೇಕ ಅಂತಿಮ ಸತ್ಯಗಳಿವೆ. ಪ್ರತಿಯೊಂದು ಜೀವಿಸುವ ಪ್ರಾಣಿ ಹಾಗೂ ಪ್ರತಿಯೊಂದಕ್ಕೆ ತನ್ನದೇ ಆದ ಸ್ವತಂತ್ರ ಅಸ್ತಿತ್ವವಿದೆ. ಈ ವಿಚಾರ ಧಾರೆಯನ್ನು ನಾವು ಲೆಬನಿಸ್ ಅವರ ಸಿದ್ಧಾಂತಗಳಲ್ಲಿ ಕಾಣಬಹುದು. ಅವರ ಅಭಿಪ್ರಾಯದಲ್ಲಿ ಈ ಜಗತ್ತಿನ ಅನೇಕ ಮೋನಾಡ್ಸ್ ಅಥವಾ ಅಣುಗಳು ಇವೆ ಅವುಗಳಿಗೆ ಯಾವುದೇ ಕಿಟಕಿಗಳಿಲ್ಲದ ಅವುಗಳ ನಡುವೆ ಪರಸ್ಪರ ಸಂಪರ್ಕ ಸಾಧ್ಯವಿಲ್ಲ.

ಈ ಮೇಲಿನ ಮೂರು ಸಿದ್ಧಾಂತಗಳನ್ನು ಅಭ್ಯಸಿಸಿದಾಗ ನಮಗೆ ತಿಳಯುವದೇನೆಂದರೆ ಯಾವುದೇ ಒಂದು ಸಿದ್ಧಾಂತವೂ ಸಂಪೂರ್ಣವಾಗಿ ನಮ್ಮ ಅನುಭವಗಳನ್ನು ಹಾಗೂ ಪ್ರವೃತ್ತಿಯನ್ನು ತೃಪ್ತಿಪಡಿಸುವದಿಲ್ಲ. ಆದುದರಿಂದಲೇ ಕಾಲಕಾಲಕ್ಕೆ ಪೂರ್ವ ಹಾಗೂ ಪಾಶ್ಚಿಮಾತ್ಯ ತತ್ವಜ್ಞಾನಿಗಳು ಬೇರೆ ಬೇರೆ ಸಿದ್ಧಾಂತಗಳನ್ನು ಪ್ರತಿಪಾದಿಸುತ್ತಾ ಬಂದಿದ್ದಾರೆ. ಸತ್ಯದಲ್ಲೂ ಪ್ರತಿಯೊಂದು ಸಿದ್ಧಾಂತವೂ ಸತ್ಯದ ಒಂದು ಮುಖವನ್ನು ಮಾತ್ರ ತೋರಿಸುತ್ತದೆ. ಈ ಎಲ್ಲ ಸಿದ್ಧಾಂತಗಳನ್ನು ಒಟ್ಟಾಗಿ ತೆಗೆದುಕೊಂಡಾಗ ಮಾತ್ರ ಅನುಭವಗಳಿಗೆ ಒಂದು ರೀತಿಯ ವಿವರಣೆ ಸಿಗುತ್ತಿದೆ. ಈ ಎಲ್ಲ ಸಿದ್ಧಾಂತಗಳು ಸೀಮಿತ ಹಾಗೂ ಪರಸ್ಪರ ಸಂಬಂಧ ಹೊಂದಿದವುಗಳು.

**ವಾಸ್ತು ಶಾಸ್ತ್ರ ಅಧ್ಯಯಣ ಶಿಬಿರ**

ಕನ್ನಡ ವಿಶ್ವವಿದ್ಯಾಲಯದ ವಾಸ್ತು ಶಾಸ್ತ್ರ ವಿಭಾಗವು ೧೯೯೭ ಆಗಸ್ಟ್ ೨೨ ರಿಂದ ೩೧ರ ವರೆಗೆ ವಾಸ್ತುಶಾಸ್ತ್ರ ಅಧ್ಯಯನ ಶಿಬಿರವನ್ನು ನಡೆಸಲು ಯೋಚಿಸಿದೆ. ಆಸಕ್ತರು ಈ ವಿಳಾಸಕ್ಕೆ ಸಂಪರ್ಕಿಸಿ.

ಸುಜ್ಞಾನಮೂರ್ತಿ, ಸಂಚಾಲಕ, ವಾಸ್ತುಶಾಸ್ತ್ರ ಅಧ್ಯಯನ, ಕನ್ನಡ ವಿಶ್ವವಿದಾಲಯ, ಹಂಪಿ, ವಿದ್ಯಾರಣ್ಯ ಕಮಲಾಪುರ-೫೮೩೨೨೧, ಹೊಸಪೇಟೆ, ಬಳ್ಳಾರಿ ಜಿಲ್ಲೆ.



## ವನಮಹೋತ್ಸವ

ಶ್ರೀ ರಾಮಕೃಷ್ಣ ಶಾಸ್ತ್ರಿ, ಶಿವಶಕ್ತಿ ನಿಲಯ, ಮಚ್ಚಿನ, ದಕ್ಷಿಣ ಕನ್ನಡ-574295.

ಮರ-ನಿಸರ್ಗವು ವಸುಧೆಯ ಬಸಿರಿಗೆ ಹಸಿರುಡುಗೆಯನ್ನು ಉಡಿಸಿ ಸಂಪದ್ಭರಿತ ಚೆಲುವಿಕೆಯನ್ನು ಮೆರೆಸಲು ತಾನಿತ್ತ ವರ. ಜೀವಜಗತ್ತಿನ ವೈವಿಧ್ಯಮಯ ಮುಖಗಳೆಲ್ಲವೂ ಒಂದಿಲ್ಲೊಂದು ವಿಧದಿಂದ ಮರಕ್ಕೆ ಋಣಿಗಳು. ಏಕೆಂದರೆ ಮರ ತಾನು ಆವರಿಸಿದ ನೆಲದಗಲಕ್ಕೂ ಶೀತಲನೆರಳನಿತ್ತು ಸುಖ ಕೊಡಬಲ್ಲುದು. ಬಹುದೂರದ ಕಾರ್ಮೋಡದ ಹಿಂಡನ್ನು ಕೈಚಾಚಿ ಬಳಿಗೆರೆದು ಸಲಿಲ ಧಾರೆಯಿಂದ ಭುವಿಯ ಒಡಲನ್ನು ತಂಪಾಗಿಸಬಲ್ಲದು. ನೆಲದಾಳದಲ್ಲಿ ಅತಿ ದೂರ ಬೇರುಗಳನ್ನು ಹರಡಿ ಕರಗಿಹೋಗುವ ಭೂಸಿರಿಯ ಶಿರವನ್ನು ಬಿಗಿದು ನಿಲ್ಲಿಸಬಲ್ಲುದು.

ಲೋಕೋತ್ತರ ಕೀರ್ತಿಗೆ ಭಾಜನವಾದ ಸುಗಂಧಿತ ಮಲ್ಲಿಗೆಯ ಬಳ್ಳಿಗಷ್ಟೇ ಅಲ್ಲ ಹತ್ತು ಹಲವು ಬದುಕುಗಳಿಗೂ ಮರವೇ ಆಧಾರವಾಗಿದೆ. ಮಂಜುಳ ಇಂಚರದಿಂದ ಅರಣ್ಯದ ಗಾಢ ಮೌನವನ್ನೊಡೆದು ಗೀತಲಹರಿಯ ಅಲೆಯಲ್ಲಿ ವನದೇವಿಯ ತಲೆದೂಗಿಸಬಲ್ಲ ಕೋಗಿಲೆಯಂತಹ ಹಕ್ಕಿಪಕ್ಷಿಯ ಬದುಕು ಅದರಲ್ಲೇ ಕುಡಿಯೊಡೆಯುತ್ತದೆ. ಮರದ ತೊಟ್ಟಿಲಿನಲ್ಲಿ ಮಲಗಿ ಜೀವನಕ್ಕೆ ಜಾರಿಕೊಳ್ಳುವ ಮನುಜನಂತೂ ತನ್ನ ಜೀವಿತದ ಪ್ರತಿಕ್ಷಣವೂ ಮರವನ್ನೇ ಅವಲಂಬಿಸಿ, ಕೊನೆಗೊಂದು ದಿನ ಮರದ ಚಟ್ಟದಲ್ಲೇ ಮಲಗಿ ವಿಶಾಲ ವಿಶ್ವಕ್ಕೆ ಮೌನವಿದಾಯ ಸಲ್ಲಿಸಿ ಹಿಡಿ ಬೂದಿಯಾಗುತ್ತಾನೆ.

ಒಂದು ಮರ ನೆಟ್ಟರೆ ನಾಲ್ಕು ವಿಧದ ಪುಣ್ಯ ಗಳಿಸಿದಂತೆ ಎಂದು ಹಿರಿಯರು ಹೇಳಿದರು. ಬಸವಳಿದ ಪಯಣಿಗನಿಗೆ ನೆರಳು, ಹಸಿದಿರುವ ಹಲವರಿಗೆ ಆಹಾರ, ನೆಟ್ಟಗೆ ನಿಲ್ಲಲಾಗದವನಿಗೆ ಆಧಾರ, ಕಡೆಗೂ ನೆಟ್ಟಮರ ಅವಸಾನ ಹೊಂದಿದರೆ ಧನಾರ್ಜನೆ ಈ ನಾಲ್ಕಕ್ಕೂ ಅದೇ ಸಾಧಕ. ಇನ್ನು ಮರದ ಬೇರು, ಎಲೆ, ತೊಗಟೆಎಲ್ಲವೂ ಔಷಧಿಯುಕ್ತ. ಗಾಳಿಯಲ್ಲಿರುವ ವಿಷಕಣಗಳನ್ನು ಹೀರಿ ಶುದ್ಧ ಹವೆಯನ್ನೇ ಪೂರೈಸುವ ಅದರ ನಿಸ್ವಾರ್ಥ ಸೇವೆ. ಬಿಗಿಯಪ್ಪುಗೆಗೆ ಸಿಗದ ಅಗಾಧ ಗಾತ್ರದ ಮರಗಳ ಒಳಗೆ ಪೃಥ್ವಿಯಲ್ಲಿ ಅದರ ಹುಟ್ಟು ಎಷ್ಟು ಕೋಟಿ ವರುಷಗಳ ಹಿಂದೆ ಆಯಿತೆನ್ನುವ ಇತಿಹಾಸ ಕೂಡ ಲಭ್ಯ. ಮನುಜ ಹುಟ್ಟುವ ಮೊದಲೇ ಇಲ್ಲಿ ಮರಗಳ ಉಗಮ.

ಇತಿಹಾಸ ಕಾಲದಿಂದಲೇ ಸಾಲುಮರಗಳನ್ನು ನೆಟ್ಟು ಬಸವಳಿದವರಿಗೆ ನೆರಳುಣಿಸುವ ಪುಣ್ಯಕಾರ್ಯಕ್ಕೆ ಮಹತ್ವ. ಮರದ ಸಮಿಧೆಗಳಿಂದ ಮಾಡಿದ ಯಾಗಯಜ್ಞಗಳೆಲ್ಲವೂ "ಲೋಕಾಃ ಸಮಸ್ತಾ ಸುಖಿನೋ ಭವಂತು" ಎಂಬ ತತ್ವಕ್ಕೆ ಬದ್ಧವಾಗಿದ್ದವು. ಪುಣ್ಯಕಾರ್ಯದ ಬಳಕೆಯ ವಿನಃ ಮರದ ಕೊಂಬೆ ಕೂಡ ಕತ್ತರಿಸುವುದು ಸ್ಮೃತಿಗಳ ದೃಷ್ಟಿಯಿಂದ ನಿಷಿದ್ಧವಾಗಿತ್ತು.

ಒಂದು ಮಗು ಹುಟ್ಟಿದ ಕೂಡಲೇ ಮರವೊಂದನ್ನು ನೆಟ್ಟು ಬೆಳೆಸುವ ಕ್ರಮಕ್ಕೆ ಶಾಸ್ತ್ರ ಮುದ್ರೆ ಒತ್ತಿದ ದೇಶಗಳೂ ಇವೆ. ಪುಣ್ಯಕಾರ್ಯದಲ್ಲಿ ದಾನ ನೀಡುವಾಗ ಒಂದು ಗಿಡವನ್ನು ಕೊಟ್ಟು ಅದನ್ನು ಆತ ನೆಡುವಂತೆ ಪರೋಕ್ಷ ಪ್ರೇರಣೆ ನೀಡಿದ ದೇಶ ನಮ್ಮದು. ಹತ್ತು ಹಲವು ವಾಣಿಜ್ಯ ಉತ್ಪನ್ನಗಳ ಕಣಜವಾಗಿದ್ದ ಆರಣ್ಯದ ಅಭಿವೃದ್ಧಿ ದೇಶದ ಪ್ರಗತಿಗೆ ಮುಖ್ಯ ಸಾಧನವೂ ಹೌದು.

ಕಾಲಕಾಲಕ್ಕೆ ಮಳೆಗರೆದು ಪೃಥ್ವಿಯನ್ನು ಸುಕ್ಷೇಮದಿಂದಿರಿಸಿದ್ದ ಕಾಡುಗಳೆಲ್ಲ ಈಗ ಬರಿದೋ ಬರಿದು. ವನದೇವಿಯ ಸೊಬಗಿನ ಮೈಕಟ್ಟು ಅವ್ಯಾಹತ ಕೊಡಲಿಯ ಪ್ರಹಾರಕ್ಕೆ ಆಹುತಿಯಾಗಿ ಸೌಮಾಂಗಲ್ಯದ ಕುರುಹುಗಳನ್ನು ಕಳೆದುಕೊಂಡ ವಿತಂತುವಿನ ಅವಸ್ಥೆ. ನೆತ್ತಿಯನ್ನು ಸುಡುವ ಬಿಸಿಲು, ಬತ್ತಿ ಹೋದ ಜಲಾಶಯ, ಒತ್ತಿ ಬರುವ ನೀರಿನಾಸರೆಯಿಲ್ಲ. ಬಾಡಿ ಬಸವಳಿದ ಹಕ್ಕಿ ಪಕ್ಷಿಗೆ ಚಂಚು ಮುಳುಗಿಸಲೂ ನೀರು ಸಿಗದ ಪರಿಸ್ಥಿತಿ. ಹಸಿವಿನ ಹಾಹಾಕಾರದಿಂದಲೇ ನಿರ್ವಂಶಗೊಂಡ ಪ್ರಾಣಿಸಂಕುಲ. ಬಿರಿದು ಬಾಯ್ದೆರೆದ ನೆಲದಲ್ಲಿ ಬಿತ್ತಿ ಬೆಳೆಯಿಲ್ಲದೆ ಶಪಿಸುತ್ತಿರುವ ಅನ್ನದಾತ.

ಈ ವಿಪರ್ಯಾಸಕ್ಕೆ ಕಾರಣಿ ಭೂತ ಬುದ್ಧಿಜೀವಿಯಾದ ಮನುಜ, ಅಲ್ಪ ಹಣದಾಸೆಗೆ ತುತ್ತಾಗಿ ನಿರ್ದಯೆಯಿಂದ ಅರಣ್ಯನಾಶ. ಧರೆಗೊರಗಿದ ಭಾರೀ ಮರಗಳ ಅಂತರಾಳದ ಕೂಗು ಅವನ ಕಲ್ಲೆದೆಯನ್ನು ಕರಗಿಸಲಿಲ್ಲ. ಕಾಂಕ್ರೀಟಿನ ಕಟ್ಟಡಗಳ ಹೊಗೆ ಚಿಮಣಿಯಿಂದ ಎದ್ದ ವಿಷಾನಿಲದ. ಧೂಮ ಭವಿಷ್ಯದ ಪೀಳಿಗೆಯ ಬದುಕನ್ನು ಕಮರಿಸದಿರಲು ದಟ್ಟ ಹಸಿರಿನ ಮರ ಬೇಕೇಬೇಕೆಂಬ ವಾಸ್ತವವನ್ನು ತಿಳಿದರೂ ಆತ ಸರಿಪಡಿಸಿಕೊಳ್ಳಲಿಲ್ಲ.

ಕುಂಕುಮವಿಲ್ಲದ ಬೋಳು ಹಣೆ. ಮರವಿಲ್ಲದ ಅರಣ್ಯ. ನಾಗರಿಕತೆ ನಡೆಸಿದ ನಿಸರ್ಗದ ಬರ್ಬರ ಹತ್ಯೆ-ಅಕ್ಷಮ್ಯ. ಇದರ ಪರಿಹಾರಕ್ಕೆ ಒಂದೇ ಮಾರ್ಗ. ಮತ್ತೆ ಗಿಡನೆಟ್ಟು ಬೆಳೆಸಿ ಹಸಿರಿನ ಉಸಿರನ್ನು ವಸುಧೆಯ ಬಸಿರಿನಿಂದ ಮಿಡಿಯುವಂತೆ ಮಾಡುವುದು. ಗಿಡ-ನೆಡುವುದು, ಅದ್ಧೂರಿಯ ಸಂಭ್ರಮದ, ಹೆಚ್ಚು ಪ್ರಚಾರ ಪಡೆಯುವ ವಿಷಯ ಖಂಡಿತಅಲ್ಲ. ನೆಟ್ಟಗಿಡ ಪ್ರಾಣಿಗಳಿಗೆ ಆಹಾರವಾಗದೆ, ಬಿಸಿಲಿಗೆ ಬಾಡದೆ, ನಳ ನಳಿಸುತ್ತ ಬದುಕುವುದು ಬೆಳೆಯುವುದು ಮಾತ್ರ ಮುಖ್ಯ. ಈಕೆಲಸ ಮಾಡಿದವನು ಅಜ್ಞಾತನೇ ಆಗಿರಲಿ, ಆದರೆ ಅದರಿಂದ ಸಿಗುವ ಪುಣ್ಯ ಅನಂತ ಕಾಲದ ತನಕ ಭವಿಷ್ಯದ ಪೀಳಿಗೆಯ ಹಸನು ಬದುಕಿನಿಂದ ಅವನಿಗೆ ಲಭ್ಯ.



# ಆತ್ಮ ನಿರ್ಣಯ

ಬಿ. ಸುಬ್ರಾಯ ಅಡಿಗ, ನಿವೃತ್ತ ಶಿಕ್ಷಕರು, ಸೊಂಡೂರು, ಬಳ್ಳಾರಿ ಜಿಲ್ಲೆ.


ಸಾಮಾಜಿಕ ವಿಕಾಸ, ಸುಖ ಹಾಗೂ ಶಾಂತಿ ದೊರೆಯಬೇಕಾದರೆ ಪ್ರತಿಯೊಬ್ಬನಲ್ಲೂ ಆತ್ಮ ವಿಶ್ವಾಸ ಹಾಗೂ ಆತ್ಮನಿರ್ಣಯದ ಯೋಗ್ಯತೆ ಇರಲೇಬೇಕು. ಆದರೆ ಈ ಗುಣವನ್ನು ಯಾರೂ ಒಮ್ಮೆಲೇ ಪಡೆದುಕೊಳ್ಳಲಾರರು. ಇವು ಬಾಲ್ಯದಿಂದಲೇ ಮೆಲ್ಲ ಮೆಲ್ಲನೆ ವೃದ್ಧಿಹೊಂದುತ್ತ ಇರಬೇಕು. ಆದ್ದರಿಂದ ವಿಕಾಸೋನ್ಮುಖ ಹಾಗೂ ಸುಖ ಸಂಪನ್ನತೆಯಿಂದ ಕೂಡಿದ ಪೂರ್ಣಸಮಾಜದ ಕಲ್ಪನೆಯನ್ನಿಟ್ಟುಕೊಂಡು ಮಾತಾಪಿತರು ಭಾವೀಯುಗನಿರ್ಮಾಪಕರೆನಿಸಿದ ತಮ್ಮ ಮಕ್ಕಳಲ್ಲಿ ಆತ್ಮವಿಶ್ವಾಸ ಹಾಗೂ ಆತ್ಮನಿರ್ಣಯ ಶಕ್ತಿ ವಿಕಾಶ ಹೊಂದುವಂತೆ ಅನುವು ಮಾಡಿಕೊಡಲಿ. ಸ್ವತಃ ತನ್ನ ಸಾಮರ್ಥ್ಯದಲ್ಲೇ ವಿಶ್ವಾಸವಿರದ ಮನುಷ್ಯ ವಿಶೇಷ ಸಮಸ್ಯೆಯೊದಗಿದಾಗ ಗಾಬರಿಯಾಗಿ ಯಾವ ನಿರ್ಣಯವನ್ನು ಕೈಗೊಳ್ಳಲಾರ. ಅಂಥ ಸ್ಥಿತಿಯಲ್ಲಿ ಆತ ಇತರರ ವಿರೋಧಿ ಅಭಿಪ್ರಾಯಗಳ ಸುಳಿಯಲ್ಲೇ ಸಿಕ್ಕಿ ವಿಲಿವಿಲಿ ಒದ್ದಾಡಬೇಕಾಗುತ್ತದೆ. ಇದಕ್ಕೆ ಬದಲಾಗಿ ಆತ್ಮನಿರ್ಣಯ ಹಾಗೂ ಆತ್ಮವಿಶ್ವಾಸದ ಗುಣವುಳ್ಳವನು ಎಂತಹ ಕಠಿಣ ಸಮಸ್ಯೆಯನ್ನು ಧೈರ್ಯದಿಂದ ಎದುರಿಸಿ ತಕ್ಕ ರೀತಿಯಲ್ಲಿ ಅದಕ್ಕೊಂದು ಪರಿಹಾರ ಕಂಡು ಹಿಡಿಯುತ್ತಾನೆ. ಆದ್ದರಿಂದ ಸಮಾಜದ ಹಾಗೂ ತಮ್ಮ ಮಕ್ಕಳ ಉನ್ನತಿ ಬಯಸುವ ಮಾತಾಪಿತರು ಬಾಲಕರಲ್ಲಿ ಆರಂಭದಿಂದಲೇ ಆತ್ಮವಿಶ್ವಾಸದ ಗುಣಗಳನ್ನು ತುಂಬಲು ಅನುಕೂಲ ಮಾಡಿಕೊಡಬೇಕು

**ಕ್ರಮವತ್ತಾದ ಶಿಕ್ಷಣ :-** ಮಕ್ಕಳಲ್ಲಿ ಈ ಗುಣಗಳನ್ನು ವಿಕಾಸಗೊಳಿಸಬೇಕಾದರೆ ಮೊತ್ತ ಮೊದಲು ನೀವು ಅವರ ಶಿಕ್ಷಣದತ್ತ ಗಮನ ಹರಿಸಬೇಕು. ಅವರು ಕಲಿಯುವ ಬಗೆಯನ್ನು ನೀವು ಪರೀಕ್ಷಿಸಬೇಕು. ಅವರಿಗೆ ಮೆಲ್ಲಮೆಲ್ಲನೆ ಎಂತಹ ಶಿಕ್ಷಣವನ್ನಾದರು ನೀಡಲು ಸಾಧ್ಯವಿದೆ. ನೀವು ಕಲಿಸುವ ವೇಳೆ ಸ್ವತಃ ತಾಳ್ಮೆಗೆಡಬಾರದು. ಅಥವಾ ಅಕಸ್ಮಾತ್ ಏನಾದರೂ ಬದಲಾವಣೆಗೈದು ಅವರ ಪೂರ್ವಭಾವನೆಗೆ ಆಘಾತವನ್ನುಂಟು ಮಾಡಬಾರದು. ಮಕ್ಕಳ ಪಾಲನೆ ಪೋಷಣೆಯಲ್ಲೂ ಒಂದು ನಿಶ್ಚಿತ ಕ್ರಮ ಇರಬೇಕು.

**ಸ್ವರಕ್ಷಣೆ :-** ಕ್ರಮಿಕ ಶಿಕ್ಷಣದೊಂದಿಗೆ ಮಕ್ಕಳಲ್ಲಿ ರಕ್ಷಣಾಭಾವನೆಯು ಬೆಳೆದು ಬರಲಿ. ಈ ರಕ್ಷಣೆ ಮೂರು ರೀತಿಯದು. ಶಾರಿರೀಕ ಆರ್ಥಿಕ ಹಾಗೂ ಮಾನಸಿಕ. ಶಾರೀರಿಕ ಹಾಗೂ ಆರ್ಥಿಕ ರಕ್ಷಣೆಯ ಬಗ್ಗೆ ಮಾತಪಿತರ ಲಕ್ಷ್ಯ ಇದ್ದೇ ಇರುತ್ತದೆ. ಆದರೆ ಅತ್ಯಮೂಲ್ಯವೂ ಅನಿವಾರ್ಯವೂ ಆದ ಮಾನಸಿಕ ರಕ್ಷಣೆಯ ಕುರಿತು ಯಾರೂ ಯೋಚಿಸುವುದಿಲ್ಲ. ಮಕ್ಕಳಲ್ಲಿ ಮಾನಸಿಕ ರಕ್ಷಣಾ ಭಾವನೆಯನ್ನು

ಬೆಳೆಯಗೊಡುವುದರಿಂದ ಅವರು ತಮಗೊದಗುವ ವಿಪತ್ತುಗಳನ್ನು ಧೈರ್ಯದಿಂದ ಎದುರಿಸುವ ಶಕ್ತಿಗಳಿಸುತ್ತಾರೆ. ಆದ್ದರಿಂದ ಮೊದಲು ಮಾನಸಿಕ ರಕ್ಷಣಾಭಾವನೆಯನ್ನೇ ಅವರಲ್ಲಿ ಮೂಡಿಸಿದರೆ, ಅದರ ನೆರವಿನಿಂದ ಇತರೆ ಎರಡನ್ನು ಸುಲಭವಾಗಿ ಪಡೆದುಕೊಳ್ಳಬಹುದು. ಮಾನಸಿಕ ರಕ್ಷಣೆ ಇರದಿದ್ದರೆ ಉಳಿದೆರಡನ್ನು ಗಳಿಸಿಯೂ ಫಲವಿಲ್ಲ.

ಮಾನಸಿಕ ರಕ್ಷಣೆಯ ಶಿಕ್ಷಣ ವೀಯಬೇಕಾದರೆ, ಆ ಬಾಲಕ ಒಂದಕ್ಕಿಂತ ಹೆಚ್ಚಿನ ಶಿಕ್ಷಣ ಪಡೆದವನಿದ್ದು ಕನಿಷ್ಠ ಎರಡು ವ್ಯವಸಾಯಗಳಲ್ಲಾದರೂ ಯೋಗ್ಯನಾಗಬೇಕು. ನಿರಾಶೆ ಮುಸುಕದಂತೆ ಜೀವನ ಹಾಗೂ ವ್ಯವಹಾರಕ್ಕೆ ಸಂಬಂಧಿಸಿದ ವಿಶ್ವಾಸವೂ ಅವನಲ್ಲಿ ಬೇರೂರಬೇಕು. ನಿರಾಶೆ ಹತ್ತಿರವೂ ಸುಳಿಯದಂತೆ ಎಚ್ಚರಿಕೆ ವಹಿಸಬೇಕು. ಬದುಕಿನ ಹಾದಿಯಲ್ಲಿ ಬರುವ ಎಡರು ತೊಡರುಗಳನ್ನು ಧೈರ್ಯದಿಂದ ಎದುರಿಸಿ ಗುರಿಯತ್ತ ಸಾಗುವ ಎದೆಗಾರಿಕೆ ಮಕ್ಕಳಲ್ಲಿ ನೆಲೆ ನಿಲ್ಲುವಂತೆ ನೀವು ಶಿಕ್ಷಣ ಕೊಡಬೇಕು. ವಿಫಲತೆಗಳಿಂದ ಭಯಭೀತರಾದ ಮಕ್ಕಳು ಮುಂದೆಂದೂ ಹೊಸ ಯೋಜನೆಗಳಿಗೆ ಕೈಹಾಕುವ ಸಾಹಸ ಮಾಡಲಾರರು. ಅಂತಹರ ಪೂರ್ತಿ ಬದುಕೇ ವಿಫಲತೆಗಳ ಇತಿಹಾಸವಾಗುವುದು.

**ನಿಮ್ಮ ಸ್ನೇಹ :-** ಮಕ್ಕಳಿಗೆ ನಿಮ್ಮ ವಾತ್ಸಲ್ಯ ದೊರೆತಾಗಲೇ ನೀವು ಅವರಲ್ಲಿ ಸಂರಕ್ಷಣೆಯ ಭಾವ ಮೂಡಿಸಬಲ್ಲಿರಿ. ತಾವು ನಿಮ್ಮ ಪರಿವಾರದ ನೆಚ್ಚಿನ ಬಾಲಕರೆಂಬ ಭಾವ ಮೂಡಿದಾಗಲೇ ಅವರಲ್ಲಿ ಆತ್ಮವಿಶ್ವಾಸವುಂಟಾಗುವುದು. ಕೆಳಮಟ್ಟದಿಂದ ಮೇಲೇರಲು ಅವರಿಗೆ ನಿಮ್ಮ ಸ್ನೇಹವೇ ದೊಡ್ಡ ಬೆಂಬಲ.

**ಅಪಾಯವನ್ನೆದುರಿಸುವುದು :-** ಯಾವ ಕೆಲಸವನ್ನು ಸ್ವತಃ ಮಾಡದೆ ಅನುಭವ ಬರಲಾಗದು. ಅದೇ ರೀತಿ ಯಾವ ಹೊಸ ಕೆಲಸವನ್ನಾರಂಭಿಸಬೇಕಾದರೂ ಅಪಾಯವನ್ನೆದುರಿಸುವ ಧೈರ್ಯ ಅತ್ಯಗತ್ಯ. ಆದ್ದರಿಂದ ಬಾಲ್ಯದಿಂದಲೇ ಮಕ್ಕಳು ಸಣ್ಣ ಸಣ್ಣ ಅಪಾಯಗಳಿಗೆ ಗುರಿಯಾಗುವಂತೆ ತಂದೆ ತಾಯಿಗಳು ನೋಡಿಕೊಳ್ಳಬೇಕು, ಯಾವ ವಿಪತ್ತುಗಳಿಂದ ಮಕ್ಕಳ ಜೀವನಕ್ಕೆ ಗಂಡಾಂತರ ಒದಗುವ ಭಯವಿದೆಯೋ ಅವುಗಳಿಗೆ ಮಾತ್ರ ಬಲಿ ಬೀಳದಂತೆ ನೀವು ಎಚ್ಚರಿಕೆ ವಹಿಸಬೇಕು. ಅಲ್ಲದೆ ಅಂತಹ ಶಿಕ್ಷಣವನ್ನು ಅವರಿಗೆ ನೀಡಬೇಕು. ಸಣ್ಣ ಸಣ್ಣ ಗಂಡಾಂತರಗಳಿಗೆ ಗುರಿಯಾಗದೆ ಅವರಿಗೆ ಅನುಭವ ಬರಲಾರದು. ಸಾಫಲ್ಯ ಸಿಕ್ಕ ಬಳಿಕ ಅವರಿಗೆ ಸ್ವನಿರ್ಣಯ ಹಾಗೂ ಸ್ವಶಕ್ತಿಯ ಬಗ್ಗೆ ವಿಶ್ವಾಸ ಮೂಡುವುದು. ಈ ವಿಶ್ವಾಸ ಹಾಗೂ ಆತ್ಮಬಲವೇ ಅವರ ಭವಿಷ್ಯಜೀವನದ ಸಂಗಾತಿಯಾಗಿ ಸಹಾಯ ಮಾಡುವುದು.



**ಸ್ವನಿರ್ಣಯದ ಅಧಿಕಾರ :-** ನೀವು ನಿಮ್ಮ ಕೆಲಸದಲ್ಲಿ ಇತರರು ಕೈ ಹಾಕುವುದನ್ನು ಮೆಚ್ಚದಿರುವಾಗ ಮಕ್ಕಳ ದೈನಂದಿನದ ವ್ಯವಹಾರದಲ್ಲಿ ನೀವೇಕೆ ಕೈಹಾಕುತ್ತೀರಿ ? ಮಕ್ಕಳು ತಮ್ಮ ವಸ್ತುಗಳನ್ನು ತಾವೇ ಕೊಳ್ಳುವಂತೆ ನೀವೇಕೆ ಎಡೆ ಮಾಡಿಕೊಡಬಾರದು ? ಬೆಲೆ ಬೇಕಿದ್ದರೆ ನೀವೆ ನಿರ್ಧರಿಸಿದರೂ ಹಣ ಕೊಟ್ಟು ಮಕ್ಕಳೇ ಆ ವಸ್ತುಗಳನ್ನು ಕೊಂಡುಕೊಳ್ಳಲಿ. ತಮ್ಮ ಆಹಾರ ಉಡುಗೆ, ತೊಡುಗೆ, ಆಟಿಕೆ-ಮೊದಲಾದುವನ್ನು ಅವರೇ ಆರಿಸಿಕೊಳ್ಳಲ್ಲಿ.... ಇವುಗಳಲ್ಲೆಲ್ಲ ಹಿರಿಯರು ವ್ಯರ್ಥವಾಗಿ ಕೈ ಹಾಕುತ್ತಾರೆ; ಪ್ರತಿಯೊಂದು ವಿಚಾರವೂ ತಮ್ಮ ಇಚ್ಛಾನುಸಾರವಾಗಿ ನಡೆಯಬೇಕೆಂದು ಹಾರೈಸುತ್ತಾರೆ. ಇದೇ ಆಜ್ಞಾಪಾಲನೆಯೆಂದು ಭಾವಿಸಲಾಗುತ್ತದೆ. ಮಾತಾಪಿತರು ಈ ದಬ್ಬಾಳಿಕೆಯಿಂದ ದುರ್ಬಲಚಿತ್ತ ಬಾಲಕನು ಅವರ ಆಜ್ಞಾಪಾಲಕನೆಂಬ ಬಿರುದು ಪಡೆದು ಪರಾವಲಂಬಿಯಾಗುತ್ತಾನೆ. ಈ ದಬ್ಬಾಳಿಕೆಗೆ ಬಗ್ಗದ ಹುಡುಗರು ಹಟಮಾರಿಗಳೂ ಸ್ವೇಚ್ಛಾಚಾರಿಗಳೂ ಎನಿಸಿ ಮನೆ ಹಾಗೂ ಸಮಾಜ ಎರಡರಲ್ಲೂ ವಿದ್ರೋಹಿಗಳೆನಿಸುತ್ತಾರೆ. ಆದ್ದರಿಂದ ಮಕ್ಕಳ ಮನೋವಿಕಾಸ ಸುಗಮವಾಗ ಬೇಕಾದರೆ ಅವರಿಗೆ ದೈನಿಕ ಜೀವನದಲ್ಲಿ ಸ್ವಲ್ಪಸ್ವಲ್ಪಾದರೂ ಸ್ವನಿರ್ಣಯದ ಅಧಿಕಾರ ಕೊಡುತ್ತಿರಬೇಕು.

ದೈನಿಕ ಜೀವನದಲ್ಲಿ ಸ್ವನಿರ್ಣಯದ ಹಕ್ಕು ಅನಿವಾರ್ಯವಿದ್ದಂತೆಯೇ ತಮ್ಮ ಕೆಲಸಗಳನ್ನು ತಾವೇ ಮಾಡಿಕೊಳ್ಳುವ ಸ್ವಾತಂತ್ರ್ಯವೂ ಅವರಿಗೆ ಬೇಕು. ತಮ್ಮ ಕೆಲಸಗಳಿಂದ ಅವರ ಯೋಗ್ಯತೆಯ ವಿಕಾಸಗುವಾತ್ತದೆ ಆತ್ಮ ವಿಶ್ವಾಸ ಹಾಗೂ ಆತ್ಮ ನಿರ್ಣಯದಲ್ಲಿ ನಿಷ್ಠೆಯುಂಟಾಗುತ್ತದೆ. ಪ್ರತಿಯೊಂದು ಕೆಲಸವೂ ಅವರ ಅನುಭವವನ್ನು ಹೆಚ್ಚಿಸುತ್ತದೆ. ಮಕ್ಕಳು ಬದುಕಿನಲ್ಲಿ ಪ್ರಯೋಗ ಮಾಡಬೇಕು.. ಈ ಜೀವನವೇ ಒಂದು ಪ್ರಯೋಗಶಾಲೆ. ಸಾಧಾರಣ ವ್ಯವಹಾರ ಹಾಗೂ ಕಾರ್ಯಗಳಲ್ಲಿ ಅವರು ತಮ್ಮ ಬುದ್ಧಿ ಶಕ್ತಿಯನ್ನು ಪ್ರಯೋಗಿಸಲಿ .... ತಮ್ಮ ಯೋಗ್ಯತೆಯನ್ನು ಉಳಿಸಿ ಹೆಚ್ಚು ಹೆಚ್ಚು ಕೆಲಸ ಮಾಡಲಿ. ಆಗ ಅವರ ಭಾವಿ ಜೀವನ ಯಶಸ್ವಿಯೂ ಸಾರ್ಥಕವೂ ಆಗಬಲ್ಲುದು.

(ಹಿಂದಿಯಿಂದ)

ಭಕ್ತಿ ಸುಭಾಕ್ಷೆಯ ನುಡಿವೆ, ನುಡಿದಂತೆ ನಡೆವೆ
ನಡೆಯೊಳಗೆ ನುಡಿಯ ಪೂರೈಸುವೆ.
ಮೇಲೆ ತ್ರಾಸು ಕಟ್ಟಳೆ ನಿಮ್ಮ ಕೈಯಲ್ಲಿ ತೂಗಿ ನೋಡು
ಒಂದು ಜವೆ ಕೊರತೆಯಾದರೆ
ಎನ್ನನದ್ದಿ ನೀನೆದ್ದು ಹೋಗು ಕೂಡಲ ಸಂಗಮ ದೇವಾ

## ಕರ್ನಾಟಕ ಸಂಗೀತ ಪಿತಾಮಹ ಪುರಂದರದಾಸ

ಲೇ. ಚಿತ್ರ ಹೊನ್ನಾವರ ಆರ್. ಜಿ. ಶ್ಯಾನುಭಾಗ ಶರಾವತಿ ಪ್ರೌಢಶಾಲೆ, ಹೊಸಾಡ ಹೊನ್ನಾವರ.



ಹರಿದಾಸರಲ್ಲಿ ಪುರಂದರದಾಸರ ಸ್ಥಾನ ಕಿರೀಟಪ್ರಾಯವಾದುದು. “ದಾಸರೆಂದರೆ ಪುರಂದರದಾಸರಯ್ಯ ಎಂದು ಅವರ ಗುರುಗಳಾದ ಶ್ರೀ ವ್ಯಾಸರಾಯರೇ ಮುಕ್ತಕಂಠದಿಂದ ಶ್ಲಾಘಿಸಿದ್ದಾರೆ. ಕರ್ನಾಟಕದ ದಾಸವರೇಣ್ಯರಾದ ಪುರಂದರದಾಸರು ಹರಿ ಸರ್ವೋತ್ತಮತ್ವದ ಕಂಪನ್ನು ಬೀರಿರುವುದರಿಂದಲೇ ಈ ಪ್ರಶಸ್ತಿಗೆ ಅರ್ಹರು ಹರಿಯ ದಾಸರಾಗಿ ಚಂದನದಂತೆ ತಮ್ಮ ಬದುಕನ್ನು ತೇದಿದ್ದಾರೆ, ಹರಿಸರ್ವೋತ್ತಮತ್ವವನ್ನು ಎತ್ತಿಹಿಡಿದಿದ್ದಾರೆ.

ಪುರಂದರದಾಸ ನಾರದ ಅವತಾರಿಗಳೆಂಬ ನಂಬಿಗೆ ಆಳವಾಗಿ ಬೇರೂರಿದೆ. ಈ ಕಾರಣದಿಂದಲೇ ಅವರು ಆಡಿದ ಹಾಡಿನ ನುಡಿಗಳೆಲ್ಲವೂ ವೇದ ಸದೃಶವಾಗಿವೆ. ಇವರ ಕೃತಿಗಳೆಲ್ಲವೂ ಧರ್ಮ, ಸಾಹಿತ್ಯ ಹಾಗೂ ಸಂಗೀತಗಳ ತ್ರಿವೇಣಿ ಸಂಗಮ. ಈ ರಚನೆಗಳು ಪುರಂದರೋಪನಿಷತ್ ಎಂಬ ಮನ್ನಣೆಗೂ ಪಾತ್ರವಾಗಿವೆ. ಮಾನವನ ಜೀವನಗಳ ಅಂಕು ಡೊಂಕಿಗೆ ಇವರ ಕೃತಿಗಳು ರಾಹುಗನ್ನಡಿಯನ್ನು ಹಿಡಿದಿವೆ. ಸಕಲರಿಗೂ ಪ್ರಿಯಕರವಾದ ನೀತಿ ಸಂಹಿತೆಯನ್ನು ಈ ಕೃತಿಗಳು ರೂಪಿಸಿದ ಪುರಂದರ ದಾಸರು ಅಗಲಿ 400 ವರ್ಷಗಳ ಮೇಲಾದರೂ ಅವರ ಪ್ರಾಸಾದಿಕವಾಣಿ ಅಚ್ಚ-ಹೊಸತನವನ್ನೇ ಉಳಿಸಿಕೊಂಡಿವೆ. ಅವು ಸರ್ವಕಾಲಿಕ ಸತ್ಯವನ್ನು ಸಾರುತ್ತಿವೆ.

ಪುರಂದರದಾಸರು 4,75,000 ಕೃತಿಗಳನ್ನು ರಚಿಸಿದರೆಂಬ ವಿಷಯ ಪ್ರಚಲಿತ ವಿದೆ. ಆದರೆ ಅವುಗಳಲ್ಲಿ ಒಂದು ಸಾವಿರಕ್ಕೆ ಮೀರದಷ್ಟು ಕೃತಿಗಳು ಉಪಲಬ್ಧವಿದೆ. ಅವರ ಬಹಳಷ್ಟು ಕೃತಿಗಳು ವಿಜಯನಗರ ಸಾಮ್ರಾಜ್ಯದ ಪತನದೊಂದಿಗೆ ಕಣ್ಮರೆ-ಯಾಗಿವೆ. ಕಾಲಗರ್ಭದ ಇತಿಹಾಸದಲ್ಲಿ ಲೀನವಾಗಿರುವ ಈ ಕೃತಿಗಳು ಬೆಳಕಿಗೆ ಬರು-ವಂತಾಗಲು ಸಂಶೋಧಕರು ಗಮನ ಹರಿಸಬೇಕಾಗಿದೆ.

**ಶ್ರೀ ಹರಿಯ ಲೀಲೆ :–** ಪುರಂದರದಾಸರ ಪೂರ್ವಾಶ್ರಮದ ಹೆಸರು ಶ್ರೀನಿವಾಸನಾಯಕ ಆದಿಯಲ್ಲಿ ಪುರಂದರದಾಸರು ಪರಮ ಲೋಭಿಯಾಗಿದ್ದರು ಜೀವನದಲ್ಲಿ ನಡೆದು ಬಂದ ಘಟನೆ ಅವರನ್ನು ಲೌಕಿಕದಿಂದ ಅಲೌಕಿಕ ಜೀವನದೆಡೆಗೆ ವಾಲಲು ಕಾರಣ-ವಾಯಿತು. ಸಂಸಾರದ ಸುಖದಲ್ಲೇ ಮಗ್ನರಾಗಿರುವ ಪುರಂದರರು ಈ ಘಟನೆಯಿಂದ ಜ್ಞಾನೋದಯವನ್ನು ಪಡೆದರು.

ಇವರಿಗೆ ಜ್ಞಾನೋದಯವನ್ನುಂಟು ಮಾಡಲೆಂದು ಶ್ರೀ ಹರಿಯು ಬ್ರಾಹ್ಮಣನ ವೇಷವನ್ನು ಮರೆಸಿ ಜಿಪುಣ ಚಕ್ರವರ್ತಿ ಎಂದೆನಿಸಿದ ಶ್ರೀನಿವಾಸನಾಯಕನ ಬಳಿಗೆ



ಮಗನ ಉಪನಯನಕ್ಕೆ ಧನ ಸಹಾಯ ಬೇಡಲು ಬಂದರು. ಆ ಬ್ರಾಹ್ಮಣನಿಗೆ ಆರು ತಿಂಗಳ ಕಾಲ ಅಲೆದಾಡಿಸಿ ಕೊನೆಗೆ ತಾನು ಸಂಗ್ರಹಿಸಿರುವ ಸವಕಲು ನಾಣ್ಯವನ್ನು ನೀಡಿದನು. ವೇಷಧಾರಿಯಾಗಿರುವ ಶ್ರೀ ಹರಿ ಶ್ರೀನಿವಾಸನಾಯಕನಿಗೆ ಬುದ್ಧಿ ಪಾಠವನ್ನು ಕಲಿಸಲು ಹಂಚಿಕೆಯನ್ನು ಹೂಡಿದನು.

ಸದಾಚಾರ ಸಂಪನ್ನಳಾದ ಆತನ ಹೆಂಡತಿ ಇರುವ ಕಡೆಗೆ ವಿಪ್ರರೂಪಿ ಶ್ರೀಹರಿಯು ಬಂದು ತನ್ನ ದುಃಖವನ್ನು ತೋಡಿಕೊಂಡನು ಅವಳ ಮನಕರಗಿತು ಎಂದು ಲೆಕ್ಕಾಚಾರ ಹಾಕಿದ. ಶ್ರೀ ಹರಿ ತನ್ನ ಮಗನ ಉಪನಯನಕ್ಕಾಗಿ ಆಕೆಯ ಮೂಗುತಿಯನ್ನು ಕಾಣಿಕೆಯಾಗಿ ಕೊಡಬೇಕೆಂದು ಒತ್ತಾಯಿಸಲಾರಂಭಿಸಿದನು. ಧರ್ಮಪರಾಣೆಯಾದ ಆಕೆಯೂ ವಿಷ್ಣುವಿಗೆ ತನ್ನ ಮೂಗುತಿಯನ್ನು ದಾನವನ್ನಾಗಿ ನೀಡಿದಳು.

ವಿಪ್ರರೂಪಿಯಾದ ಶ್ರೀಹರಿ ಆ ಒಡವೆಯನ್ನು ಶ್ರೀನಿವಾಸನಾಯಕರಿಗೆ ಮಾರಲು ತಂದನು. ಮೂಗುತಿಯನ್ನು ಕಂಡೊಡನೆ ನಾಯಕನಿಗೆ ಇದು ತನ್ನ ಹೆಂಡತಿಯ ಒಡವೆ ಎಂಬ ಶಂಕೆ ಮೂಡಿತ್ತು. ವಿಪ್ರನಿಗೆ ಸ್ವಲ್ಪ ನಿಲ್ಲು ಎಂದು ಹೇಳಿ ಮನೆಯ ಕಡೆಗೆ ಧಾವಿಸಿದನು. ಹೆಂಡತಿಯನ್ನು ನೋಡಿದಾಕ್ಷಣ ಮೂಗಿನ ಮೇಲೆ ಮೂಗುತಿ ಕಾಣಿಸಲಿಲ್ಲ. ಒಡನೆಯೇ ಒಡವೆಯನ್ನು ತಂದು ಕೊಡಲು ಬಲಾತ್ಕರಿಸಿದನು.

ಧರ್ಮಸಂಕಟಕ್ಕೆ ಸಿಲುಕಿದ ನಾಯಕನ ಹೆಂಡತಿ ದಿಕ್ಕುಗಾಣದೆ ಅಸಹಾಯಕಳಾಗಿ ಓಡಿಹೋಗಿ ವಿಷಪ್ರಾಶನ ಮಾಡಲು ಬಟ್ಟಲನ್ನೆತ್ತಿಕೊಂಡಳು. ತಕ್ಷಣವೇ ವಿಷದ ಬಟ್ಟಲಿನಲ್ಲಿ ಮೂಗುತಿ ಬಿದ್ದ ಸದ್ದಾಯಿತು. ಇದು ಪರಮಾತ್ಮನು ಆಡಿಸಿದ ಲೀಲೆ ಎಂದು ಹರ್ಷಚಿತ್ತಳಾದಳು. ಆ ಮೂಗುತಿಯನ್ನು ತಂದು ತನ್ನ ಗಂಡನಿಗೆ ನೀಡಿದಳು. ಶ್ರೀನಿವಾಸನಾಯಕನಿಗೆ ಆಶ್ಚರ್ಯವೇ ಪರಮಾಶ್ಚರ್ಯ. ತಾನು ಪೆಟ್ಟಿಗೆಯಲ್ಲಿರಿಸಿದ ಮೂಗುತಿಯು ಕಣ್ಮರೆಯಾಗಿತ್ತು ತನ್ನನ್ನು ಕಾಯಲು ಹೇಳಿರುವ ವಿಪ್ರನೂ ಅಂಗಡಿಯ ಹತ್ತಿರ ಇರಲಿಲ್ಲ. ತನ್ನ ಸತ್ವ ಪರೀಕ್ಷೆ ಮಾಡಲು ಬಂದಿರವವನು ಪರಮಾತ್ಮನೇ ಇರಬೇಕೆಂದು ಅಂದುಕೊಂಡನು. ತನ್ನ ಜ್ಞಾನೋದಯಕ್ಕಾಗಿಯೇ ಇದನ್ನು ದೇವರು ಘಟಿಸಿರುವರು ಎಂದು ನಿರ್ಧರಿಸಿದನು.

**ವಿರಾಗಿಯಾದ ಶ್ರೀನಿವಾಸರಾಯ :–** ಶ್ರೀನಿವಾಸ ನಾಯಕರು ತಮ್ಮ ಸಂಸಾರದ ಸಮೇತವಾಗಿ ವಿಜಯನಗರಕ್ಕೆ ಚಿತ್ತೈಸಿದರು. ಅಲ್ಲಿರುವ ವ್ಯಾಸತೀರ್ಥರನ್ನು ಕಂಡು ಅವರಿಂದ ಹರಿದಾಸ ದೀಕ್ಷೆಯನ್ನು ಪಡೆದು ಪುರಂದರ ವಿಠ್ಠಲ ಎಂಬ ಅಂಕಿತನಾಮವನ್ನು ಪಡೆದರು. ಪುರಂದರದಾಸರ ಮಕ್ಕಳಾದರೂ ತಂದೆಯಂತೆಯೆ ಹರಿದಾಸ ಕೈಂಕರ್ಯವನ್ನು ಕೈಕೊಂಡರು. ಪುರಂದರದಾಸರ ಪೂರ್ವಾರ್ಧ ಜೀವನವು ಲೌಕಿಕವಾಗಿರುವಷ್ಟೇ ಉತ್ತರಾರ್ಧವೂ ಅಷ್ಟೇ ಅಲೌಕಿಕವಾಗಿತ್ತು.

ಗಾಯಕರಾಗಿ ಹೆಗಲ ಮೇಲೆ ಜೋಳಿಗೆಯನ್ನು ಹಾಕಿಕೊಂಡು ಒಂದು ಕೈಯಲ್ಲಿ ಚಿಟಿಕೆಯನ್ನು ಬಾರಿಸುತ್ತಾ ಇನ್ನೊಂದು ಕೈಯಲ್ಲಿ ತಂಬೂರಿಯನ್ನು ಮೀಟುತ್ತಾ ಸಪರಿವಾರ ಸಮೇತವಾಗಿ ಹರಿದಾಸರಾಗಿ ಬಾಳಲು ಮಾಡಿರುವ ಪುರಂದರದಾಸರ ಸಂಕಲ್ಪ ಪ್ರಯಾಸದಾಯಕವೂ ಹಾಗೂ ಪ್ರವಾಸದಾಯಕವೂ ಆಗಿತ್ತು. ಅವರ ಕೃತಿಗಳಿಂದ ಇದು ವ್ಯಕ್ತವಾಗುತ್ತದೆ. ಇವರ ಕೃತಿಗಳು ವ್ಯಾಪಕವಾದ ಆತ್ಮ ನಿವೇದನೆ ಹಾಗೂ ಆತ್ಮಶೋಧನೆಯ ಪರಿಧಿಗೆ ಸೀಮಿತ. ಸುಮಾರು ನಾಲ್ಕು ದಶಕಗಳ ಕಾಲ ತಮ್ಮ ಸಂಸಾರದ ಅಂಟುನಂಟಿಗೆ ಜೋತುಬಿದ್ದ ಈ ಹರಿದಾಸ ರುಚಿಯಿಂದ ತನ್ನ ಸಂಸಾರಕ್ಕೆ ತಿಲಾಂಜಲಿಯನ್ನಿತ್ತನು.

ತನುಮನವನ್ನು ಮುಕುಂದನಿಗಾಗಿಯೇ ದಾರೆ ಎರೆದಿರುವ ಪುರಂದರದಾಸರಿಗೆ ಕನಸಿನಲ್ಲಿ ಆ ಭಗವಂತನ ದರ್ಶನವಾಗುತ್ತಲೇ ಇರುತ್ತಿದ್ದು, ಭಗವಂತನ ಸ್ವಪ್ನದರ್ಶನವನ್ನು "ಕಂಡೆ ನಾ ಕನಸಿನಲ್ಲಿ ಗೋವಿಂದನ ಕಂಡೆ ನಾ ಕನಸಿನಲಿ ಕನಕ ರತ್ನಖಣಿಯ ನಂದನ ಕಂದ ಮುಕುಂದನ ಚರಣವ" ಎಂದು ಸಂಗೀತದಲ್ಲಿ ಮಿಡಿದಿದ್ದಾರೆ. ಹರಿದಾಸ ಕೈಂಕರ್ಯವನ್ನು ಕೈಕೊಳ್ಳುವ ಪುರಂದರದಾಸರಿಗೆ ಇತರ ಹರಿದಾಸರ ಮೇಲೆಯೂ ಅಭಿಮಾನವಿತ್ತು. ಹರಿದಾಸರು ಬಳಸುವ ಎಲ್ಲ ಪರಿಕರಗಳು ಅವರಿಗೆ ಮುಕ್ತಿಯ ಸಾಧನಗಳಾಗಿದ್ದವು. ತಂಬೂರಿ ಮಿಡಿದವನು ಭವಸಾಗರವನ್ನು ದಾಟುತ್ತಾನೆ. ತಾಳ ತಟ್ಟಿದವನು ದೇವತೆಯನ್ನು ಸೇರುತ್ತಾನೆ. ಗೆಜ್ಜೆಯನ್ನು ಕಟ್ಟಿ ಕುಣಿದವನುಳ ಖಳರನ್ನು ಮೆಟ್ಟಿ ನಿಂತವನು. ಗಾಯನ ಹಾಡಿದವನು ಹರಿಯ ಸಾಕ್ಷಾತ್ಕಾರ ಪಡಿಸಿಕೊಳ್ಳುವವನು ಪುರಂದರ ವಿಠಲನ ನೋಡಿದವನು ವೈಕುಂಠನ್ನು ಕಾಣುತ್ತಾನೆ. ಎಂದು ಹರಿದಾಸರು ಬಳಸುವ ತಂಬೂರಿ, ತಾಳ ಗೆಜ್ಜೆಗಳ ಸಾರ್ಥಕತೆಯನ್ನು ಕೊಂಡಾಡಿದ್ದಾರೆ ಹರಿಗೂ ಹರಿದಾಸರಿಗೂ ಇರುವ ನಿಕಟ ಬಾಂಧವ್ಯವನ್ನು ವಿಷದಿಸಿದ್ದಾರೆ. ದಾಸನಾಗುವುದಕ್ಕೆ ಅದೆಷ್ಟು ಜನ್ಮದ ಸುಕೃತದ ಫಲವೆಂದು ತಿಳಿಯಾಗಿ ತಿಳಿಸಿದ್ದಾರೆ. ಗುರುವಿನ ಅನುಗ್ರಹ, ಹರಿದಾಸರ ಸಂಗದಿಂದ ತಮಗಾಗಿರುವ ಆನಂದವನ್ನು ಹಾಡಿನಲ್ಲಿ ತೋಡಿದ್ದಾರೆ. ಪರಮಾತ್ಮನೊಡನೆ ಸಲಿಗೆ ಬೆಳೆಸಿಕೊಂಡಿರುವ ಹರಿದಾಸರು "ನೀನ್ಯಾಕೋ ನಿನ್ನ ಹಂಗ್ಯಾಕೋ ನಿನ್ನ ನಾಮದ ಬಲವೊಂದಿದ್ದರೆ ಸಾಕು" ಎಂದು ಹೇಳಲುಹಿಂಜರಿಯಲಿಲ್ಲ. ಭಗವಂತನೊಡನೆ ಸಖ್ಯ ಬೆಳೆಸಿರುವ ಭಕ್ತನ ಒಪ್ಪಂದ ವೈಖರಿಯನ್ನು ಪುರಂದರದಾಸರು ಮನೋಜ್ಞವಾಗಿ ಚಿತ್ರಿಸಿರುವರು. ಎನಗೂ ಆಣೆ ನಿನಗೂ ಆಣೆ ಇಬ್ಬರಿಗೂ ಭಕ್ತರಾಣೆ ಎಂದು ಭಕ್ತನು ಭಗವಂತನಿಗೆ ಆಣೆ ಹಾಕಲೂ ಹಿಂಜರಿಯಲಿಲ್ಲ.

ಹರಿದಾಸರ ವೇಷಭೂಷಣಗಳನ್ನು ತೊಟ್ಟು ಕುಣಿಯಲು ತನ್ನ ಸಹಧರ್ಮಿಣಿ ಎಷ್ಟರಮಟ್ಟಿಗೆ ಕಾರಣಭೂತಳಾಗಿದ್ದಳೆಂಬುದನ್ನು ಭಕ್ತಿಗೀತೆಯಲ್ಲಿ ಈ ವಿಚಾರವನ್ನು ಪೋಣಿಸಿರುವರು. ನಡೆದಿರುವ ಅನಿರೀಕ್ಷಿತ ಘಟನೆ ಶ್ರೀಧರನ ಸೇವೆಗೈಯಲು



ಬದುಕಿನಲ್ಲಿ ಹೆಬ್ಬಾಗಿಲನ್ನು ತೆರೆದಿದೆ, ಹೆಂಡತಿಯ ಮಾತಿಗೆ ಮನವೊಡ್ಡಿ ದಂಡಿಗೆ ಬೆತ್ತ ಗೋಪಾಳ ಬುಟ್ಟಿಗಳನ್ನು ಹಿಡಿದು ಹೊರಟಿರುವೆನು. ಸರಸಿಜಾಕ್ಷನಾದ ಶ್ರೀಮನ್ನಾರಾಯಣ ಪ್ರೇರಣೆಯಿಂದ ತುಳಸಿಮಾಲೆಯನ್ನು ಹಾಕಿಕೊಂಡಿರುವೆನೆಂದು ಪುರಂದರದಾಸರು ಹೇಳುತ್ತಾರೆ. ಆದದ್ದೆಲ್ಲ ಒಳಿತೇ ಆಯಿತು. ಶ್ರೀಧರನ ಸೇವೆ ಮಾಡಲು ಸಾಧನ ಸಂಪತ್ತಾಯಿತು. ದಂಡಿಗೆ ಬೆತ್ತಹಿಡಿಯುವುದಕ್ಕೆ ಮುಂಚೆ ಬಾಗಿ ನಾಚುತಲಿದ್ದೆ ಹೆಂಡತಿ ಸಂತತಿ ಸಾವಿರಾಗಲಿ ದಂಡಿಗೆ ಬೆತ್ತ ಪಿಡಿಸಿದಳಯ್ಯ...........ಅರಸನೆಂದು ತಿರುಗುತಲಿದ್ದೆ ಶ್ರೀ ಪುರಂದರ ವಿಠ್ಠಲನು ತುಳಸಿಮಾಲೆ ಹಾಕಿಸಿದನು, ಎಂದಿದ್ದಾರೆ. ಒಂದಾನೊಂದು ಕಾಲದಲ್ಲಿ ಆಗರ್ಭ ಶ್ರೀಮಂತನಾದ ತಾನು ಇಂದು ಹರಿದಾಸನಾದರೂ ಭೂಪತಿಯ ಸ್ಥಾನದಲ್ಲಿದ್ದೇವೆಂದು ಬಿಗಿದು ಹೇಳಿದ್ದಾರೆ. ಆದಿಯಲ್ಲಿ ವಾಣಿಜ್ಯ ವ್ಯಾಪಾರದಲ್ಲಿದ್ದ ತಾನು ಶ್ರೀಪತಿಪಾದಾರವಿಂದ ಸೇವೆಯೆಂಬ ವ್ಯಾಪಾರ ಮಾಡುತ್ತಿದ್ದೇನೆಂದು ಹೇಳಿರುವನು. ಅಂದು ಹಣದ ಚೀಲದಲ್ಲಿಯೇ ಇರುವ ಕೈಗಳು ಇಂದು ಸೇವೆಗಾಗಿ ಮೀಸಲಾಗಿದೆ. ಈ ವ್ಯಾಪಾರದಲ್ಲಿ ಸಂಪಾದಿಸಿದ ಸಂಬಳವೆಂದರೆ ಯುಕ್ತಿಯೇ ಆಗಿದೆ. ಅಂದು ನನ್ನಯ ಶ್ರೀಮಂತಿಕೆಯ ಸೊಕ್ಕಿನ ವ್ಯಾಪಾರವಾಗಿತ್ತು. ಇಂದು ಪರಮಾತ್ಮನ ಪ್ರೀತ್ಯರ್ಥವಾಗಿ ಸೇವೆಯನ್ನು ಸಲ್ಲಿಸುತ್ತಿರುವ ವ್ಯಾಪಾರ ಇದರ ವೈಖರಿಯೇ ಬೇರೆ

ಪರಮ ಲೋಬಿಯಾಗಿದ್ದ ಶ್ರೀನಿವಾಸನಾಯಕರು ಪರಮ ವಿರಕ್ತಿಯಾಗಿ ಶ್ರೀ ವ್ಯಾಸತೀರ್ಥರನ್ನು ಕಂಡು ಪುರಂದರವಿಠ್ಠಲ ಎಂಬ ಅಂಕಿತ ಪಡೆದಾಗ ತನಗಾದ ಅಪರಿಮಿತ ಆನಂದವನ್ನು ಹೀಗೆ ಬಣ್ಣಿಸಿರುವರು.

ವ್ಯಾಸರಾಯರ ಚರಣ ಕಮಲ ದರುಶನವೆನಗೆ
ಏಳು ಜನ್ಮದ ಸುಕೃತ ಫಲ ದೊರಕಿತೋ ಎನ್ನ
ಸಾಸಿರ ಕುಲಕೋಟಿ ಪಾವನವಾಯಿತು........
...........ದಾಸರ ಕರುಣವೆನ್ನಮೇಲೆ ಇರಲಾಗಿ.

**ಪುರಂದರೋಪನಿಷತ್ತು :-** ಪುರಂದರದಾಸರ ಕೃತಿಯು ಆಧ್ಯಾತ್ಮಿಕ ಮಹಾತ್ಮೆಯಿಂದ ಕೂಡಿದವುಗಳಾಗಿವೆ. ಸ್ವಮತ ನಿಷ್ಟೆ ಶ್ರೀ ಮಧ್ವಾಚಾರ್ಯರ ಕುರಿತಾಗಿರುವ ಭಕ್ತಿ, ಅವತಾರತ್ರಯ ಮಹಿಮೆ, ಹರಿನಾಮ ಹಾಗೂ ಹರಿದಾಸರಿಗಾಗಿ ಇರುವ ಗೌರವ ಇವರ ಕೃತಿಗಳಲ್ಲಿರುವ ವಿಷಯ ವಸ್ತುಗಳಾಗಿವೆ. ತಮ್ಮ ಕೃತಿಗಳಿಗೆ ಪುರಂದರರುಸ್ವಾನುಭವ ಹಾಗೂ ರಸಾನುಭವದ ಲೇಪನವನ್ನು ನೀಡಿದ್ದಾರೆ

ಹರಿನಾಮ ಸರ್ವೋತ್ತಮತ್ವವನ್ನು ಸದಾ ಪ್ರತಿಪಾದಿಸುತ್ತಿದ್ದರು. ಹರಿನಾಮ ಮೇಲ್ಮೆಯನ್ನು ಚಿತ್ತಾಕರ್ಷಕವಾಗಿ ವರ್ಣಿಸಿರುವರು. "ಕಲಿಯುಗದಲಿ ಹರಿನಾಮವ ನೆನೆಸಿದರೆ ಕುಲಕೋಟಿಗಳುದ್ಧರಿಸುವುವೇ" ಎಂದು ಮನುಕುಲಕ್ಕೆ ಭರವಸೆಯನ್ನು ನೀಡಿದ್ದಾರೆ. ಸ್ನಾನ, ಮೌನ, ಧ್ಯಾನ, ಪೂಜಾವಿಧಾನ ಉಪದೇಶ ಹಾಗೂ ಜಪತಪಗಳ ಅರಿ

ವಿಲ್ಲದವರೂ ಹರಿನಾಮ ಸ್ಮರಣೆಯಿಂದ ಪುನೀತರಾಗಬಹುದೆಂದು ಸಾರಿ ಹೇಳುವವರು ಪುರಂದರವಿಠ್ಠಲನಾಮ ಕಲ್ಲು ಸಕ್ಕರೆಯಿದ್ಧಂತೆ. ಭಕ್ತರು ಇದರ ಸವಿಯನುಣಲು ಬಾಯಿಯನ್ನು ಚಪ್ಪರಿಸುತ್ತಾರೆ ಈ ಸಕವನ್ನು ಎತ್ತು ಹೇರುಗಳಿಂದ ಹೊತ್ತು ಮಾರುವಂತಿಲ್ಲ. ಗೋಣಿಚೀಲಗಳಲ್ಲಿ ತುಂಬುವಂತಿಲ್ಲ. ಎತ್ತ ಹೋದರೂ ಇದಕ್ಕೆಬಾಡಿಗೆ ಸುಂಕ ಭಯವಿಲ್ಲ. ಅಮಿತವಾದ ಲಾಭ ದೊರಕಿಸಿಕೊಡುವ ಸರಕೆಂಬುವುದರಲ್ಲಿ ಸಂದೇಹವಿಲ್ಲ. ನಷ್ಟವಾಗುವ ಪ್ರಸಂಗವಿಲ್ಲ. ಕೆಟ್ಟು ಹೋಗವ ಸಂದರ್ಭವೂ ಇಲ್ಲ ಇದರ ಬೆಲೆಯನ್ನು ಹಣಕಾಸಿನ ಮಾನದಂಡದಿಂದ ಅಳೆಯಲಾಗುವುದಿಲ್ಲ. ಕಲ್ಲು ಸಕ್ಕರೆ ಯೆಂದು ಇರುವೆಗಳೂ ಮುತ್ತಲಾರವು. ಊರುಕೇರಿಗಳಲ್ಲಿ ನಾಮ ವಾಸಿಯೂಗಿರುವ ಈ ವಸ್ತುವನ್ನು ಸಂತೆಯಲ್ಲೂ ಮಾರುವಂತಿಲ್ಲ. ಇದರ ರುಚಿಯನ್ನು ಸವಿದವರೆ ಬಲ್ಲರು. ಎಂದು ದಾಸರು ಹರಿಮಹಿಮೆಯನ್ನು ಕೊಂಡಾಡಿದ್ದಾರೆ. ರಾಮನಾಮ ಪಾಯಸಕ್ಕೆ ಕೃಷ್ಣನಾಮ ಸಕ್ಕರೆ ವಿಠ್ಠಲನಾಮತುಪ್ಪ ಬೆರೆಸಿ ಬಾಯಿ ಚಪ್ಪರಿಸಿದರೋ ಎಂದು ಇವರು ಹಾಡುವಾಗ ಒಂದೇ ನಾಮದೊಳಗೆ ಹಲವಾರು ದೇವರ ಹೆಸರುಗಳನ್ನು ಹುದುಗಿಸಿ ಹೇಳಿದ್ದಾರೆ. ಹರಿಯನ್ನು ಒಲಿಸುವದಕ್ಕೂ, ವೈಕುಂಠದಲ್ಲಿ ಹೋಗಿ ನೆಲೆ ಸುವುದಕ್ಕೂ ಹರಿನಾಮ ಸ್ಮರಣೆಯೊಂದು ಕೀಲಿಕೈ ಎನ್ನುವದನ್ನು ಎಲ್ಲೆಡೆಯಲ್ಲಿಯೂ ಎತ್ತಿ ತೋರಿಸುವರು.

ಪುರಂದರ ದಾಸರ ಕೃತಿಗಳಿಗೆ ಸಾಹಿತ್ಯ ಸೌಂದರ್ಯ ಇದೆ. ಸಂಗೀತ ಮಾಧುರ್ಯವಿದೆ. ಅವು ಅಧ್ಯಾತ್ಮ ದೃಷ್ಟಿಯಿಂದ ಎಷ್ಟು ಹಿರಿದಾಗಿರುವುವೋ ಸಾಹಿತ್ಯ ದೃಷ್ಟಿಯಿಂದಲೂ ಅಷ್ಟೇ ಪ್ರಾಧಾನ್ಯತೆಯನ್ನು ಪಡೆದಿವೆ. ಕರ್ನಾಟಕ ಸಂಗೀತವನ್ನು ಶಾಸ್ತ್ರೋಕ್ತವಾಗಿ ಕಲಿಯಲು ಇವರ ಕೃತಿಗಳು ಉದ್ಬೋಧಕವಾಗಿವೆ. ಇವರು ಕೇವಲ ವೈಷ್ಣವ ಭಕ್ತಿಯ ಪ್ರಚಾರದಿಂದ ಮಾತ್ರವೇ ತೃಪ್ತರಾಗದೆ. ಸಮಸ್ತ ಮನುಕುಲದ ಸರ್ವೋನ್ನತಿಗಾಗಿ ಸಾರ್ವತ್ರಿಕ ಸಂಗತಿಗಳನ್ನು ಎಲ್ಲರಿಗೂ ಒಪ್ಪಿಗೆಯಾಗುವಂತೆ ಹೇಳಿದ್ದಾರೆ. ಮನುಜ ಶರೀರವಿದೇನು ಸುಖ ಎಂದು ಸಂಸಾರದ ಬಾಧೆ ಬವಣೆಗಳ ಕುರಿತು ಕುರಿತಾಗಿ ಹಗುರವಾಗಿ ಆಡಿದರೂ "ಮಾನವ ಜನ್ಮ ಬಹುದೊಡ್ಡದು ಇದ ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ" ಎಂದು ಇನ್ನೊಂದೆಡೆಗೆ ಮಾನವ ಜನ್ಮಕ್ಕೆ ಪುರಸ್ಕಾರ ನೀಡಿದ್ದಾರೆ. "ಈಸಬೇಕು ಇದ್ದು ಜಯಿಸಬೇಕು" ಎಂದು ಜೀವನವನ್ನು ದ್ವಿಮುಖವಾಗಿ ಚಿತ್ರಿಸಿದ್ದಾರೆ. ಯಾರೊಬ್ಬರೂ ಸಂಸಾರ ಕಂಡು ಬೆದರಬಾರದು. ಅದು ಸ್ಥಿರವೆಂದೂ ಮೋಸ ಹೋಗಬಾರದು. ತಾವರೆ ಎಲೆಯು ನೀರಿನಲ್ಲಿ ಸೋಂಕಿಯೂ ಸೋಂಕದಂತೆ ಇರಬೇಕು. ಗೇರು ಹಣ್ಣಿನ ಬೀಜ ಹೊರಕ್ಕೆ ಚಾಚಿದ್ದೂ ಕಾಯಿಗೆಅಂಟಿ ಕೊಂಡಿರುವಂತೆ ನಿರ್ಲಿಪ್ತವಾಗಿ ಬಾಳನ್ನು ನಡೆಸಬೇಕೆನ್ನುತ್ತಾರೆ. ಪುರಂದರದಾಸರು.

ದಾಸರು ಸತ್ಯಕ್ಕೆ ಅಪಾರ ಬೆಲೆಯನ್ನಿತ್ತಿದ್ದಾರೆ. ಸತ್ಯವೆಂಬುದೆ ಸ್ನಾನ ಉಪವಾಸ. ಜಪನೇಮ ಸಾತ್ವಿಕ ಜೀವನ ರೂಪವನ್ನು ಹೇಳಿದ್ದಾರೆ. ಪುರಂದರದಾಸರ ಉಪದೇಶಗಳು ಸರ್ವಕಾಲಿಕ ಸತ್ಯವನ್ನೇ ಹೇಳುತ್ತೇವೆ ಸರ್ವಕಾಲಕ್ಕೂ ಅನ್ವಯಿತವಾಗಿವೆ. ನಮ್ಮ ನಿತ್ಯ ಜೀವನದಲ್ಲಿ ಅವು ಒಡಮೂಡಿಸಿ ಕೊಳ್ಳಬೇಕಾಗಿದೆ.

# ನಾಟಕ ಸಾರ್ವಭೌಮ ಶ್ರೀ ಬೇಲೂರು ಕೃಷ್ಣಮೂರ್ತಿ

ಕವಿತಾಕೃಷ್ಣ, ಪ್ರಸಿದ್ಧ ಸಾಹಿತಿಗಳು, ಕ್ಯಾತ್ಸಂದ್ರ



ಕನ್ನಡ ನಾಟಕಕಾರರಲ್ಲಿ ತಮ್ಮದೇ ಆದ ಧ್ಯೇಯಧೋರಣೆಗಳನ್ನು ಅಭಿವ್ಯಕ್ತಪಡಿಸುತ್ತಾ ಕೀರ್ತಿಯಶಸ್ಸನ್ನು ಅರ್ಜಿಸಿ ಗುರಿಮುಟ್ಟಿದವರ ಪೈಕಿ, ಕಲಾಯೋಗಿ ಶ್ರೀ ಬೇಲೂರು ಕೃಷ್ಣಮೂರ್ತಿಯವರು ಪ್ರಧಾನರಾಗಿ ನಿಲ್ಲುತ್ತಾರೆ. ವಿಶ್ವಕಲಾ ಸಾಗರವೇ ಸಮ್ಮಿಳಿತಗೊಂಡ ಬೇಲೂರಿನ ಶ್ರೀ ಚನ್ನಕೇಶವ ದೇವಾಲಯದ ಸೌಂದರ್ಯವನ್ನು ನೋಡುವಷ್ಟೆ ವೈವಿಧ್ಯಮಯ ಕಲೆಗಳ ಸಂಗಮ ಇವರು.

ಮೂರು ದಶಕಗಳ ಅಲ್ಪಕಾಲದಲ್ಲಿಯೇ 75 ಅತ್ಯಮೂಲ್ಯವಾದ ನಾಟಕಗಳನ್ನು ರಚಿಸಿ, ಕನ್ನಡ ಸಾರಸ್ವತ ಲೋಕಕ್ಕೆ ಗಣನೀಯವಾದ ಕೊಡುಗೆಯನ್ನು ನೀಡಿದ್ದಾರೆ, ಇವರ ಅನೇಕ ನಾಟಕಗಳು, ಹತ್ತಾರು ಆವೃತ್ತಿ ಕಂಡು, ಕನ್ನಡನಾಡಿನ ಮನೆಮಾತಾಗಿವೆ. "ತ್ಯಾಗಿ" ನಾಟಕ ಇಪ್ಪತ್ತನೇ ಮುದ್ರಣ ಕಂಡು ನಾಟಕ ಕ್ಷೇತ್ರದಲ್ಲಿಯೇ ದಾಖಲೆ ಮೂಡಿಸಿದೆ, "ಅಡುಮುಟ್ಟದ ಸೊಪ್ಪಿಲ್ಲ" ಎಂಬ ನಾಣ್ಣುಡಿಯಂತೆ "ಬೇಲೂರರು ಬರಿಯದ ನಾಟಕವಿಲ್ಲ" ತ್ಯಾಗಿ ನಾಟಕ ಆಡದ ಊರಿಲ್ಲ ಎಂದು ಹೇಳಬಹುದು, ಇವರ ಎಲ್ಲಾ ನಾಟಕಗಳೂ ಒಂದಲ್ಲ ಒಂದು ರೀತಿ ದಾಖಲೆ ಸ್ಥಾಪಿಸಿವೆ. ಕನ್ನಡ ಸಂಘಗಳು ಇರುವ ಎಲ್ಲಾ ರಾಜ್ಯಗಳಲ್ಲೂ ಅಭಿನಯಸಲ್ಪಟ್ಟವೆ. ಅಷ್ಟೇ ಏಕೆ ಅಮೇರಿಕಾ, ಕೆನಡಾ, ಮಸ್ಕಟ್ ಮುಂತಾದ ರಾಷ್ಟ್ರಗಳಲ್ಲೂ ಅಭಿನಯಿಸಲ್ಪಟ್ಟವೆ.

ಶ್ರೀ ಬೇಲೂರರ ನಿಜ ನಾಮಧೇಯ ಎಂ. ಕೃಷ್ಣಮೂರ್ತಿರಾವ್. 'ಎಂ' ಎಂದರೆ ಮಾದನಹಳ್ಳಿ, ಇದು ಅರಸೀಕೆರೆ ತಾಲ್ಲೂಕು, ಜಾವಗಲ್ ಹೋಬಳಿಯಲ್ಲಿರುವ ಒಂದು ಪುಟ್ಟ ಗ್ರಾಮ. ಆ ಗ್ರಾಮದ ಶ್ಯಾನುಭೋಗರ ಮನೆತನದಲ್ಲಿ ಹುಟ್ಟಿದ ಇವರು ಹಾಸನದಲ್ಲಿ ವಿದ್ಯಾಭ್ಯಾಸ ಮುಗಿಸಿ ಭಾರತ ಸೇವಾದಳದ, ಹಾಸನ ಜಿಲ್ಲಾ ಸಂಘಟಿಕರಾಗಿ, ಸೇವೆ ಸಲ್ಲಿಸಿ 1952 ರಲ್ಲಿ ದೈಹಿಕ ಶಿಕ್ಷಕರಾಗಿ ಕಲಾ ದೇಗುಲವಾದ ಬೇಲೂರನ್ನು ಸೇರಿದರು, ಅಂದಿನಿಂದ 38 ವರ್ಷಗಳ ಕಾಲ ಸೇವೆ ಸಲ್ಲಿಸಿ 1990 ರಲ್ಲಿ ನಿವೃತ್ತಿ ಹೊಂದಿದರು.

**ನಾಟಕಕಾರರಾಗಿ :–** ಸಮಯ ಸಂದರ್ಭಗಳು ವ್ಯಕ್ತಿಗಳ ದಿಕ್ಕನ್ನೇ ಬದಲಿಸುತ್ತವೆ ಎಂಬುದಕ್ಕೆ ಇದೊಂದು ನಿದರ್ಶನ, ದೈಹಿಕ ಶಿಕ್ಷಕರಾಗಿದ್ದ ಇವರು ಒಳ್ಳೆಯ ನಟರೂ ಆಗಿದ್ದರು. ದಿವಂಗತ ಮುಸುರಿ ಕೃಷ್ಣಮೂರ್ತಿಯವರು ಹಿಂದೆ ಸ್ಥಾಪಿಸಿದ್ದ ದತ್ತಾತ್ರೇಯ ನಾಟಕ ಮಂಡಳಿಯಲ್ಲಿಯೂ ಸಹಾ ನಟರಾಗಿ ಸೇವೆ ಸಲ್ಲಿಸಿರುತ್ತಾರೆ. ಒಮ್ಮೆ ಬೇಲೂರಿನಲ್ಲಿ ಪಾನನಿರೋಧ ಸಪ್ತಾಹ ಜರುಗಿತು. ಪಾನ ನಿರೋದಧ ಬಗ್ಗೆ ನಾಟಕ ಅಭಿನಯಿಸಬೇಕೆಂದು ಅಂದಿನ ತಾಲ್ಲೂಕು ಬೋರ್ಡ್ ಅಧ್ಯಕ್ಷರಾಗಿದ್ದ ಶ್ರೀ ಹೆಚ್.ವಿ. ನಂಜುಂಡಯ್ಯ ಎಂಬುವವರು ಕೇಳಿಕೊಂಡರು. ಇದರ ಫಲವಾಗಿ 1962 ರಲ್ಲಿ "ಬಲಿದಾನ" ಎಂಬ ನಾಟಕ ರೂಪಗೊಂಡು ರಂಗದ ಮೇಲೆ ಪ್ರಯೋಗಿಸಲ್ಪಟ್ಟು ಅನೇಕ ಜನರಿಂದ, ಮಂತ್ರಿವರ್ಯರಿಂದ ಶಭಾಸಗಿರಿ ಗಿಟ್ಟಿಸಿಕೊಂಡರು. ಇವರೆಲ್ಲರ ಅಭಿಮಾನದ ನುಡಿಗಳೇ ನಾಟಕ ಬರವಣಿಗೆಗೆ ಪ್ರೇರಣೆಯಾಯಿತು. ಅಂದಿನಿಂದ ಇವರ ಬರಹಕ್ಕೆ ಶುಕ್ರದೆಸೆ. ತ್ಯಾಗಿ, ಕಂಬನಿ, ದ್ರೋಹಿ, ಬಾಡಿದ ಹೂವು, ಮಹಾತ್ಯಾಗಿ, ಮುರಿದ ಮನೆ, ಹೀಗೆ 24 ನಾಟಕಗಳು ಹೊರಬಂದವು. ಇವರು ಎಂದೂ ದೇವಾಲಯಕ್ಕೆ ಹೋದವರಲ್ಲ, ತೀರ್ಥಪ್ರಸಾದಕ್ಕೆ ಕೈ ಒಡ್ಡಿದವರೂ ಅಲ್ಲ. ಜನರಲ್ಲಿ ಅಡಗಿರುವ ಅಂಧ ಶ್ರದ್ಧೆ ಮೂಢನಂಬಿಕೆಗಳ ಬಗ್ಗೆ ಸಿಡಿದೆದ್ದು, ಮೂಢನಂಬಿಕೆಗಳನ್ನು ಹೋಗಲಾಡಿಸಿ ವೈಚಾರಿಕ ಪ್ರಜ್ಞೆ ಮೂಡಿಸಬೇಕೆಂದು ಹೋರಾಡುತ್ತಿದ್ದಾರೆ. ದೇವರ ಹೆಸರಿನಲ್ಲಿ ನಡೆಯುತ್ತಿರುವ ಅನ್ಯಾಯ ಅತ್ಯಾಚಾರಗಳನ್ನು ಎಳೆ ಎಳೆಯಾಗಿ ಬಿಡಿಸಿ ತೋರಿಸಿದ ನಾಟಕವೇ "ಲಚ್ಚಿ" ಇದು ಇವರ 25 ನೇ ಕೃತಿ. ಬಸವೀ ಪದ್ಧತಿಯ ಕಂದಾಚಾರವನ್ನು ಖಂಡಿಸಿ ಬೆಳಕು ಬೀರುವ ಈ ನಾಟಕ ಐದು ಸಾವಿರಕ್ಕೂ ಹೆಚ್ಚು ಪ್ರದರ್ಶನ ಕಂಡಿದೆ. ಗುಂಡೂಬಳಗ, ರಂಗಣ್ಣನ ರಾದ್ಧಾಂತ, ಫಜೀತಿ, ತರ್ಲೆತಿಪ್ಪಣ್ಣ, ಪುಡಾರಿ ಪುಟ್ಟಪ್ಪ, ಚಡ್ಡಿಚಿಕ್ಕ ಮುಂತಾದ ಸುಮಾರು ಅರವತ್ತು ನಗೆನಾಟಕಗಳು ವಿದ್ಯಾರ್ಥಿ ವೃಂದಕ್ಕೆ ಮೋಡಿ ಹಾಕಿವೆ.

**ಬಹುಮುಖ ಪ್ರತಿಭೆ :–** ಇವರು ಒಬ್ಬ ವ್ಯಕ್ತಿಯಲ್ಲ ಒಂದು ಶಕ್ತಿ ಎಂದು ಹೇಳಬಹುದು, ನಾಲ್ಕಾರು ಜನ ಸಾಧಿಸುವ ಕಾರ್ಯ ಓರ್ವವ್ಯಕ್ತಿ ಸಾಧಿಸಿದವನೆಂದರೆ ಇದು ಅಚ್ಚರಿಯ ವಿಷಯವಲ್ಲವೇ ? ಇವರು ಉತ್ತಮ ಮಾಂತ್ರಿಕರು, ಕೈಚಳಕ ವಿದ್ಯೆಯನ್ನು ಕರಗತ ಮಾಡಿಕೊಂಡು ಪ್ರೇಕ್ಷಕರನ್ನು ಸೋಜಿಗದಲ್ಲಿ ಮುಳುಗಿಸಬಲ್ಲರು.



ಸಂಮೋಹನಾ ವಿದ್ಯೆ ತಜ್ಞರು, ವಶೀಕರಣ ವಿದ್ಯೆ ಪ್ರವೀಣರು, ಈ ವಿದ್ಯೆಯಿಂದ ಅನೇಕ ರೋಗಗಳನ್ನು ನಿವಾರಿಸಿದ್ದಾರೆ. ಶಾಲೆಯಲ್ಲಿ ಮಕ್ಕಳಿಗೆ ಬರುತ್ತಿದ್ದ ದೆವ್ವಗಳನ್ನು ಬಿಡಿಸಿ ಇದು ದೆವ್ವದ ಕಾಟವಲ್ಲ ಮಾನಸಿಕ ಕ್ಲೇಶ ಎಂದು ಸಾಬೀತುಪಡಿಸಿರುತ್ತಾರೆ. ಇವರ ಪ್ರಕಾರ ದೇವರು ದೆವ್ವ ಮೈಮೇಲೆ ಬರುವವರು ಮಾನಸಿಕ ರೋಗಿಗಳು. ಎಂಬುದು ಇವರ ಅಭಿಪ್ರಾಯ. ಇವರು ಉತ್ತಮ ಛಾಯಗ್ರಾಹಕರು. ಇವರು ತೆಗೆದ ಅನೇಕ ಭಾವಚಿತ್ರಗಳು ನಾಡಿನಪ್ರಮುಖ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಸರ್ಪವಿಷ ಚಿಕಿತ್ಸಕರೂಕೂಡಾ, ಈ ಬಗ್ಗೆ ಅಲ್ಲಲ್ಲಿ ಶಿಬಿರಗಳನ್ನೇರ್ಪಡಿಸಿ ಸರ್ಪದ ಬಗ್ಗೆ ಜನಗಳಲ್ಲಿರುವ ಮೂಢನಂಬಿಕೆಯ ಬಗ್ಗೆ ತಿಳಿಸುವುದಲ್ಲದೇ ಹಾವಿನ ಇತಿಹಾಸ, ಹಾವು ಕಡಿದಾಗ ಮಾಡಬಹುದಾದ ಬಗ್ಗೆ ಪ್ರಥಮ ಚಿಕಿತ್ಸೆ ಬಗ್ಗೆ ತಿಳುವಳಿಕೆ ನೀಡಿರುತ್ತಾರೆ. ಇವರು ಉತ್ತಮ ನಟರು, ಪ್ರಸಾದನಕಲೆ ಕರಗತ, ನೂಲುವುದು, ನೇಯುವುದು, ಗೃಹವೈದ್ಯ, ಸ್ವಮೂತ್ರ ಚಿಕಿತ್ಸೆ, ರೇಡಿಯೊ ಇಂಜನಿಯರಿಂದ ಇವುಗಳಲ್ಲಿ ಶಿಕ್ಷಣ ಪಡೆದು ಪ್ರಯೋಗಿಸುತ್ತಿದ್ದಾರೆ. ಇವರೇ ಸ್ವಂತ ಮುದ್ರಣಾಲಯ ಹೊಂದಿ ಅವರ ಕೆಲವು ಪುಸ್ತಕಗಳನ್ನು ಅವರೆ ಮುದ್ರಿಸುತ್ತಾರೆ.

ಇವರು ವನ್ಯ ಪ್ರಾಣಿ ಪಕ್ಷಿ ಸಂಕಲಗಳ ಮಿತ್ರರು ಕೂಡ. ಇವರು ಪ್ರಕೃತಿ ಪ್ರಿಯರು ಎಂಬುದಕ್ಕೆ ಅವರ ಮನೆಯ ಹಿತ್ತಲಿನಲ್ಲಿ ಬೆಳೆಸಿರುವ ವಿವಿಧ ಜಾತಿಯ ಹಣ್ಣು ಹೂ ಗಿಡಗಳೆ ಸಾಕ್ಷಿ. ಏನೂ ಕಂಡರೂ ಅದನ್ನು ಕಲಿತು ಮಾಡುವ ಆಸಕ್ತಿ ಇವರದು. ಛದ್ಮವೇಷದಲ್ಲಿ ಇವರದ್ದು ನಾಡಿನಲ್ಲೇ ದೊಡ್ಡ ಹೆಸರು. ಒಮ್ಮೆ ಇವರು ಭಿಕ್ಷುಕನ ವೇಷದಲ್ಲಿ ಬಂದಾಗ ಹೆತ್ತ ತಂದೆಯೇ ಬೈದು ಮನೆಯಿಂದ ದೂಡಿದರು. ಪೋಲಿಸರು ಒಮ್ಮೆ ಲಾಟಿಯಿಂದಲೂ ಬಡಿದಿದ್ದರು.

**ಬಿರುದುಗಳ ರಾಜ :–** ಕರ್ನಾಟಕ ನಾಟಕ ಅಕಾಡಮಿ 1993 ಪ್ರಶಸ್ತಿ ನೀಡಿ ಗೌರವಿಸಿದೆ. ಆಲೂರಿನ ಮಿತ್ರರು ನಾಟಕಶ್ರೀ ಎಂಬ ಸಂಭಾವನಾ ಗ್ರಂಥ ಅರ್ಪಿಸಿರುತ್ತಾರೆ. 1997 ರಲ್ಲಿ ಹಾಸನದಲ್ಲಿ ನಡೆದ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ

ಕಳೆದ ಜೂನ್ 20 ರಂದು ಚಿಕ್ಕಮಗಳೂರಿನ ಕುವೆಂಪು ರಂಗಮಂದಿರದಲ್ಲಿ ಶ್ರೀಯುತರ 5 ನೇ "ವಿಧಿವಿಲಾಸ" ಎಂಬ ನಾಟಕದ ಬಿಡುಗಡೆ ಮೂಲಕ ವಜ್ರ ಮಹೋತ್ಸವವನ್ನು ಆಚರಿಸಲಾಯಿತು. ಈ ಕಾರ್ಯಕ್ರಮದ ಅಂಗವಾಗಿ, ಮೂರು ದಿನಗಳ ಕಾಲ ನಾಟಕೋತ್ಸವವೂ ಸಹಾ ಜರುಗಿದವು. ಇದೇ ಸಂದರ್ಭದಲ್ಲಿ ಶ್ರೀ ಬೇಲೂರು ಕೃಷ್ಣಮೂರ್ತಿಯವರನ್ನು ಕುರಿತು ನಾನು ಬರೆದಿರುವ "ನಾಟಕ ಸಾರ್ವಭೌಮ" ಎಂಬ ಅಭಿನಂದನಾ ಗ್ರಂಥವನ್ನು ಅವರಿಗೆ ಅರ್ಪಿಸಲಾಯಿತು.

ಈ ಕಾರ್ಯಕ್ರಮವನ್ನು ಚಿಕ್ಕಮಂಗಳೂರಿನ ಅರಿವು ವೇದಿಕೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ರಂಗವೇಶ ಪತ್ರಿಕೆ, ಬೇಲೂರು ತಾಲ್ಲೋಕ್, ಕನ್ನಡ ಸಾಹಿತ್ಯ ಪರಿಷತ್ತು ತುಮಕೂರಿನ ಕವಿತಾ ಪ್ರಕಾಶನ ಇವರುಗಳ ಸಹಯೋಗದೊಂದಿಗೆ ನಡೆಸಲಾಯಿತು.

# ಪ್ಲೇಟೋನ ಶೈಕ್ಷಣಿಕ ಚಿಂತನೆಗಳು

ಡಿ. ಮೀನಾಕ್ಷಿ, ಸಂಶೋಧನ ಸಹಾಯಕಿ, ಮಾಹಿತಿ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರಾಜಕೀಯದ ತವರೂರು ಎಂದು ಕರೆಸಿ ಕೊಂಡಿರುವದೇಶ ಗ್ರೀಕ್. ಗ್ರೀಕ್‌ನ ಹೆಸರಾಂತ ರಾಜ್ಯವಾದ ಅಥೆನ್ಸ್‌ನ 'ಎಜಿನಾ' ಪ್ಲೇಟೋನ ಜನ್ಮಸ್ಥಳ (ಕ್ರಿ.ಪೂ. ೪೨೭-೩೪೭). ಪ್ಲೇಟೋನ ನಿಜವಾದ ಹೆಸರು ಅರಿಸ್ಟೋಕ್ಲೆಸ್. ಪ್ಲೇಟೋನ ಕೊಡುಗೆಗಳಲ್ಲಿ ಒಟ್ಟು ೪೨ ಸಂವಾದ (ಡೈಲಾಗ್ಸ್)ಗಳಿವೆ. ಅವುಗಳನ್ನು ಮೂರು ವರ್ಗವಾಗಿ ವಿಂಗಡಿಸಲಾಗಿದೆ. ೧. ಯುಥಿಪ್ರೋ ಮತ್ತು ಕ್ರಿಟೋ, ೨. ಫಿಡೋ, ಸಿಂಪೋಸಿಯಂ ಮತ್ತು ರಿಪಬ್ಲಿಕ್ ೩. ಸ್ಟೇಟ್ಸ್ ಮನ್ ಮತ್ತು ಲಾ.

ಪ್ರಾಚೀನ ರಾಜಕೀಯ ಚಿಂತಕರಲ್ಲಿ ಉನ್ನತಸ್ಥಾನ ಹೊಂದಿರುವ ಪ್ಲೇಟೋನ ಶೈಕ್ಷಣಿಕ ಚಿಂತನೆಗಳ ಮೇಲೆ ಪ್ರಭಾವ ಬೀರಿದ ಕೆಲವು ವಿಚಾರಗಳಿವೆ. ಗ್ರೀಕ್‌ನ ಎರಡು ಪ್ರಮುಖ ರಾಜ್ಯಗಳಾದ ಅಥೆನ್ಸ್ ಮತ್ತು ಸ್ಪಾರ್ಟ, ಪ್ಲೇಟೋನ ಮಾತೃ-ಭೂಮಿ ಅಥೈನ್ಸ್‌ನ ಪ್ರಜಾಪ್ರಭುತ್ವ ವ್ಯವಸ್ಥೆ, ಕಣ್ಣೆದುರೇ ನಡೆದ ಅಥೆನ್ಸ್ ಮತ್ತು ಸ್ಪಾರ್ಟ್ ನಡುವಿನ ಯುದ್ಧ, ರಾಜಕೀಯ, ಅಸ್ಥಿರತೆ, ಅರಾಜಕತೆ, ಅಶಾಂತಿ, ಪರಿ-ಣಾಮವಾಗಿ ನಿರಂಕುಶ ಪ್ರಭುತ್ವ ಇವುಗಳಿಂದ ಗಾಢವಾಗಿ ಪ್ರಭಾವಿತನಾಗುತ್ತಾನೆ.

ತತ್ವಜ್ಞಾನಿಯಾದ ಸಾಕ್ರೆಟಸ್ ಪ್ರಜಾಪ್ರಭುತ್ವದ ವಿರೋಧಿ. ಸಾಕ್ರೆಟಸ್‌ನ ಚಿಂತನೆಗಳನ್ನು ಶಿಷ್ಯನಾದ ಪ್ಲೇಟೋನ ಬರಹಗಳಲ್ಲಿ ಕಾಣಬಹುದು. ಸದಾಚಾರವೇ ಜ್ಞಾನ. ಇದನ್ನು ಅನುಸರಿಸಿದ ಪ್ರಜೆಗಳು ಹಾಗೂ ಆಡಳಿತಗಾರರು ದಕ್ಷರಾಗುತ್ತಾರೆ. ಕೇವಲ ಚುನಾವಣೆಯಿಂದ ವ್ಯವಸ್ಥಿತ ಆಡಳಿತ ಸಾಧ್ಯವಿಲ್ಲ ಎಂಬಂತಹ ಸಾಕ್ರೆಟಸ್‌ನ ವಿಚಾರಗಳನ್ನು ಅಥೆನ್ಸ್‌ನ ಯುವಕರನ್ನು ಅಡ್ಡದಾರಿ-ಗೆಳೆಯುತ್ತಿವೆ. ರಾಜಪ್ರಭುತ್ವಕ್ಕೆ ಕಂಟಕವಾಗುತ್ತಿದೆ ಎಂದು, ಅಲ್ಲಿದ್ದ ಪ್ರಜಾಪ್ರಭುತ್ವ ಸರ್ಕಾರ ಅವನನ್ನು ಬಂಧಿಸಿ ಮರಣದಂಡನೆ ವಿಧಿಸಿ ಹೆಮ್‌ಲಾಕ್ ವಿಷ ಕುಡಿಸುತ್ತದೆ.

ಗುರುವಿನ ತತ್ವ-ವಿಚಾರಗಳನ್ನು ಅಪಾರವಾಗಿ ಗೌರವಿಸುತ್ತಿದ್ದ ಪ್ಲೇಟೋ ಈ ಘಟನೆಯಿಂದ ಮಾನಸಿಕವಾಗಿ ಆಘಾತಕ್ಕೀಡಾಗುತ್ತಾನೆ. ಪ್ರಜಾಪ್ರಭುತ್ವದ ಕಡು ವಿರೋಧಿಯಾಗುತ್ತಾನೆ. ಇಂತಹ ಕೆಟ್ಟ ವ್ಯವಸ್ಥಗೆ ಪರಿಹಾರವಾಗಿ ಹೊಸದನ್ನು ಕಂಡು ಹಿಡಿಯಲೇಬೇಕೆಂದುನಿರ್ಧರಿಸುತ್ತಾನೆ.

ಸೋಫಿಸ್ಟರ ಚಿಂತನಾ ಶಾಲೆಯ ಪ್ರಯೋಗಾತ್ಮಕ ಜ್ಞಾನ, ಸಾಮೂಹಿಕ ಹೆಂಡತಿಯರ ವಿಚಾರ, ಮಿಥಾಲಜಿ, ವ್ಯಾಕರಣ, ಗಣಿತ, ಜ್ಯೋತಿಶಾಸ್ತ್ರ, ಸಂಗೀತದ



ವಿಚಾರಗಳು ಪ್ಲೇಟೋನನ್ನು ಪ್ರಭಾವಿಸಿದವು. ಇವೆಲ್ಲವುಗಳೊಂದಿಗೆ ಪ್ಲೇಟೋ ಇಟಲಿ, ಭಾರತ, ಈಜಿಪ್ಟ, ಸೈರಾಕ್ಯೂಸ್ ದೇಶಗಳಿಗೆ ಭೇಟಿ ನೀಡಿ, ಅಲ್ಲಿರುವ ರಾಜಕೀಯ ವ್ಯವಸ್ಥೆಗಳನ್ನು ಬಹು ಸೂಕ್ಷ್ಮವಾಗಿ ಅಧ್ಯಯನ ಮಾಡುತ್ತಾನೆ. ತಾಯ್ನಾಡಿಗೆ ಮರಳಿ "ಅಕಾಡೆಮಿ"ಯನ್ನು ಸ್ಥಾಪಿಸುತ್ತಾನೆ.

ಪ್ಲೇಟೋ ತನ್ನ ಸುತ್ತಾಟ, ಅಧ್ಯಯನ-ತತ್ವಜ್ಞಾನಿಗಳ ಹಾಗೂ ಅವನ ಸಮಕಾಲೀನ ರಾಜಕೀಯ ವಿದ್ಯಮಾನಗಳ ಪ್ರಭಾವಗಳಿಂದ ಪ್ರೇರಿತನಾಗಿ, ಒಂದು ರಾಜ್ಯ ಆದರ್ಶರಾಜ್ಯವಾಗಲು ಪೂರಕವಾದ ಅಂಶಗಳು ಯಾವುವು ಎಂಬುದನ್ನು ಕಂಡು ಕೊಳ್ಳುತ್ತಾನೆ. ತನ್ನ ಕೃತಿಯಾದ "ರಿಪಬ್ಲಿಕ್"ನಲ್ಲಿ ಮುಖ್ಯವಾಗಿ ಆದರ್ಶ ರಾಜ್ಯಕ್ಕೆ ಬೇಕಾದ ಶಿಕ್ಷಣ, ನ್ಯಾಯ, ನೈತಿಕ ವಿಷಯಗಳು ಪತ್ನಿ ಮತ್ತು ಆಸ್ತಿಯ ಸಮತಾವಾದ (ಕಮ್ಯುನಿಸಮ್ ಆಫ್ ಪ್ರಾಪರ್ಟಿ ಅಂಡ್ ವೈವ್ಸ್), ತತ್ವಜ್ಞಾನಿ ಅರಸುಗಳ ಆಳ್ವಿಕೆ (ಅಡ್ಮಿನಿಸ್ಟ್ರೇಷನ್ ಆಫ್ ಫಿಲಾಸಫರ್ ಕಿಂಗ್ಸ್)ಯ ಕುರಿತು ಚಿಂತನೆ ನಡೆಸಿದ್ದಾನೆ.

ಪ್ಲೇಟೋನ ಆದರ್ಶ ರಾಜ್ಯದ ಅಡಿಗಲ್ಲು ಶಿಕ್ಷಣ. ಶಿಕ್ಷಣದ ಅಂತಿಮ ಗುರಿ ದಕ್ಷ ಆಡಳಿತ ನಡೆಸಲು ಬೇಕಾದ ತತ್ವಜ್ಞಾನಿ ಅರಸುಗಳನ್ನು ಉತ್ಪಾದಿಸುವುದು. ಇವನ ಶಿಕ್ಷಣ ವ್ಯವಸ್ಥೆ ಮೂರು ಹಂತಗಳಿಂದ ಕೂಡಿದೆ. ಅಂತೆಯೇ ಆದರ್ಶ ರಾಜ್ಯದ ಸಮಾಜವೂ ರೀಜನಿಂಗ್, ಸ್ಪಿರಿಟ್ ಮತ್ತು ಅಪೆಟೈಟ್ ಎಂಬ ಮೂರು ವರ್ಗಗಳಾಗಿ ವಿಂಗಡಿಸಲ್ಪಟ್ಟವೆ. ಸಮಾಜದಲ್ಲಿನ ವರ್ಗಗಳಿಗೂ, ಶಿಕ್ಷಣದ ಹಂತಗಳಿಗೂ ಪರಸ್ಪರ ಸಂಬಂಧವಿದೆ.

ಹತ್ತರಿಂದ ಇಪ್ಪತ್ತನೇ ವಯಸ್ಸಿನ ನಡುವಿನ ಶಿಕ್ಷಣವು ಪ್ರಥಮ ಹಂತವಾಗಿದೆ. ಕಲೆಗೆ ಆದರ್ಶ ರಾಜ್ಯದಲ್ಲಿ ಮಕ್ಕಳನ್ನು ಪೋಷಕರಿಂದ ಬೇರ್ಪಡಿಸಲಾಗುತ್ತದೆ. ಕಲೆಗೆ ಸಂಬಂಧಿಸಿದ ಸಂಗೀತ, ಧರ್ಮ, ಅಂಗಸಾಧನೆಯಂಥಹ ವಿಷಯಗಳು ಇವರ ಅಧ್ಯಯನ ವಸ್ತುಗಳಾಗಿರುತ್ತವೆ. ಪ್ಲೇಟೋ ಪ್ರಕಾರ ಸಂಗೀತ ವ್ಯಕ್ತಿಯ ವ್ಯಕ್ತಿತ್ವಕ್ಕೆ ಸಂಸ್ಕಾರ ನೀಡಿದರೆ, ಅಂಗಸಾಧನೆಯು ದೈಹಿಕ ದೃಢತೆ ನೀಡುತ್ತದೆ. ಯುದ್ಧಭೂಮಿಗೆ ಸಜ್ಜುಗೊಳಿಸುತ್ತದೆ. ಯುದ್ಧ ನಡೆಯುವ ಪ್ರದೇಶಗಳಿಗೆ ಕಳುಹಿಸಿ ಪ್ರತ್ಯಕ್ಷವಾಗಿ, ಪ್ರಾಯೋಗಿಕವಾಗಿ ಯುದ್ಧ ಕೌಶಲ ತಂತ್ರದಂತಹ ಸೂಕ್ಷ್ಮಗಳನ್ನು ತಿಳಿಯಪಡಿಸಲಾಗುತ್ತಿತ್ತು. ಪ್ರಥಮ ಹಂತದಲ್ಲಿ ನಡೆಸುವ ಪರೀಕ್ಷೆಯಲ್ಲಿ ಉತ್ತೀರ್ಣರಾದವರು ಮುಂದಿನ ಹಂತದ ಶಿಕ್ಷಣಕ್ಕೆ ಯೋಗ್ಯರಾಗುತ್ತಾರೆ. ಅನುತ್ತೀರ್ಣರಾದವರು ಅಪಟೈಟ್ ವರ್ಗಕ್ಕೆ ಕಳುಹಿಸಲ್ಪಡುತ್ತಾರೆ.

ಇಪ್ಪತ್ತರಿಂದ ಮೂವತ್ತರ ವಯಸ್ಸಿನ ನಡುವಿನ ಶಿಕ್ಷಣವು ದ್ವಿತೀಯ ಹಂತವಾಗಿದೆ. ಗಣಿತದಲ್ಲಿ ಗಣಿತ ಮತ್ತು ವಿಜ್ಞಾನ ಅಧ್ಯಯನದ ಪ್ರಮುಖ ವಿಷಯಗಳಾಗಿದ್ದವು.

ಪರಿಣಿತಿ ಹೊಂದಿದವರು ಬುದ್ಧಿವಂತರೆಂದು ಪರಿಗಣಿಸಲ್ಪಡುತ್ತಿದ್ದರು. ಅವರಿಗೆ ಪ್ರಥಮ ಆದ್ಯತೆ ಇರುತ್ತಿತ್ತು. ಭೂಮಿತಿಯ ಜ್ಞಾನವಿಲ್ಲದವರಿಗೆ ಪ್ರವೇಶವಿಲ್ಲ ಎಂದು ಪ್ಲೇಟೋ ತನ್ನ ಅಕಾಡೆಮಿಯಲ್ಲಿ ಫಲಕವನ್ನೇ ಹಾಕಿಸಿದ್ದನು. ರೇಖಾಗಣಿತಕ್ಕೆ ಅದರಲ್ಲೂ ಸಾಮಾನ್ಯ ರೇಖಾಗಣಿತ ಮತ್ತು ಘನ ರೇಖಾಗಣಿತ ಹೆಚ್ಚಿನ ಆದ್ಯತೆ ಪಡೆದ ಅಧ್ಯಯನ ವಿಷಯಗಳಾಗಿದ್ದವು. ಇತರ ರಾಜ್ಯಗಳಿಗೆ ಮುತ್ತಿಗೆ ಹಾಕುವಾಗ ಯುದ್ಧ ನಡೆಯುವ ಪ್ರದೇಶಗಳಿಗೆ ಹೋಗುವಾಗ, ಅಡ್ಡಿಪಡಿಸುವ ಬೆಟ್ಟಗುಡ್ಡ, ಕಂದಕ, ಕಣಿವೆಗಳನ್ನು ದಾಟುವ, ದಾಟಲು ಬೇಕಾಗುವ ಜ್ಞಾನ ಗಣಿತದಿಂದ ದೊರೆಯುತ್ತಿತ್ತು. ಸೇತುವೆಗಳ ನಿರ್ಮಾಣಕ್ಕೂ ಸಹಾಯವಾಗುತ್ತಿತ್ತು. ಬುದ್ಧಿವಂತಿಕೆಯ ಅಳತೆಗೋಲಾಗಿ ಇರುವ ಪರೀಕ್ಷೆಯಲ್ಲಿ ಉತ್ತೀರ್ಣರಾದವರು ಉನ್ನತ ಶಿಕ್ಷಣಕ್ಕೆ ಯೋಗ್ಯರಾಗುವರು. ಅನುತ್ತೀರ್ಣರು ಸ್ಪಿರಿಟ್ ವರ್ಗಕ್ಕೆ ಸೇರುತ್ತಾರೆ.

ಪ್ಲೇಟೋ ಪ್ರಕಾರ ೨೦ನೇ ವರ್ಷದ ಪರೀಕ್ಷೆಯಲ್ಲಿ ಕಬ್ಬಿಣವನ್ನು ಹಿತ್ತಾಳೆ ಮತ್ತು ಬಂಗಾರದಿಂದ ಬೇರ್ಪಡಿಸಲಾಗುವುದು. ೩೦ನೇ ವರ್ಷದ ಪರೀಕ್ಷೆಯಲ್ಲಿ ಹಿತ್ತಾಳೆಯನ್ನು ಬಂಗಾರದಿಂದ ಬೇರ್ಪಡಿಸಲಾಗುವುದು. ಅನಂತರ ಉಳಿದವರು ಶಿಕ್ಷಣಕ್ಕೆ ಯೋಗ್ಯರಾದವರು. ಅವರು ಬಂಗಾರವಿದ್ದಂತೆ (ಕಬ್ಬಿಣ-ಅಪೆಟೈಟ್, ಹಿತ್ತಾಳೆ ಸ್ಪಿರಿಟ್, ಬಂಗಾರ–ರೀಸನಿಂಗ್).

೩೦ ರಿಂದ ೫೦ನೇ ವಯಸ್ಸಿನ ಶಿಕ್ಷಣವು ತೃತೀಯ ಮತ್ತು ಅಂತಿಮ ಹಂತವಾಗಿದೆ. ಪ್ಲೇಟೋ ಬಂಗಾರ ಎಂದು ಗುರುತಿಸಿರುವ ರೀಸನಿಂಗ್ ವರ್ಗಕ್ಕೆ ೩೦ರಿಂದ ೩೫ನೇ ವಯಸ್ಸಿನವರೆಗೆ ತತ್ವಜ್ಞಾನ, ತರ್ಕ, ಆಧ್ಯಾತ್ಮ, ರಾಜನೀತಿ ನಿಪುಣತೆಯ ವಿಷಯಗಳನ್ನು ಕಲಿಸಲಾಗುತ್ತಿತ್ತು. ಅಂತಿಮವಾಗಿ ಪರೀಕ್ಷೆಯಲ್ಲಿ ಉತ್ತೀರ್ಣರಾದವರು ಅತ್ಯುತ್ತಮ ಆಡಳಿತಗಾರರಾಗಲು ಅರ್ಹತೆ ಪಡೆಯುತ್ತಾರೆ. ಅನುತ್ತೀರ್ಣರು ಸ್ಪಿರೀಟ್ ವರ್ಗಕ್ಕೆ ಸೇರುತ್ತಾರೆ. ೩೦ ರಿಂದ ೫೦ನೇ ವರ್ಷದ ನಡುವಿನ ತರಬೇತಿಯು ಪ್ರೋಬೇಷನರಿ ಅವಧಿ ಆಗಿರುತ್ತದೆ. ರಾಷ್ಟ್ರಾಡಳಿತದ ವಿವಿಧ ಹಂತಗಳಲ್ಲಿ ಪ್ರಯೋಗಾತ್ಮಕ ತರಬೇತಿ ಕೊಡಲಾಗುತ್ತದೆ. ತರಬೇತಿಯ ಸಮಯದಲ್ಲಿ ಆಸೆ, ಆಮಿಷಗಳನ್ನೊಡ್ಡಿ ಇವರ ವರ್ತನೆಯನ್ನು, ಪ್ರಾಮಾಣಿಕತೆಯನ್ನು ಪರೀಕ್ಷಿಸಲಾಗುವುದು. ಸಮಸ್ಯೆಗಳನ್ನು ಎದುರಿಸುವಲ್ಲಿ ಅವರ ಜಾಣ್ಮೆಯನ್ನು ಸೂಕ್ಷ್ಮವಾಗಿ ಗಮನಿಸಲಾಗುವುದು. ತರಬೇತಿಯಲ್ಲಿ ಉತ್ತೀರ್ಣರಾದವರು ಅತ್ಯುತ್ತಮ ಆಡಳಿತಗಾರರಾಗುತ್ತಾರೆ. ಇವರು ಸಂಪೂರ್ಣ ಆರೋಗ್ಯವಂತರಾಗಿರುತ್ತಾರೆ. ಆದರ್ಶ ರಾಷ್ಟ್ರದಲ್ಲಿ ತತ್ವಜ್ಞಾನಿ ಅರಸುಗಳಾಗಿ, ಶಾಶ್ವತವಾಗಿ ಆಡಳಿತರಂಗದಲ್ಲಿ ಇರುವರು. ಇವರು ಸತತವಾಗಿ ತತ್ವಜ್ಞಾನವನ್ನು ಅಧ್ಯಯನ ಮಾಡುತ್ತಲೇ ಇರಬೇಕು.



ಪ್ಲೇಟೋನ ಚಿಂತನೆಗಳನ್ನು ಇಡಿಯಾಗಿ ಗಮನಿಸಿದರೆ ಶಿಕ್ಷಣದಲ್ಲಿ ಶಿಸ್ತಿಗೆ ಬಹಳ ಪ್ರಾಮುಖ್ಯತೆ ಇದೆ. ಶಿಕ್ಷಣ ಕಡ್ಡಾಯವಾಗಿತ್ತು. ಸ್ತ್ರೀ-ಪುರುಷರಿಬ್ಬರಿಗೂ ಸಮಾನ ಶೈಕ್ಷಣಿಕ ಅವಕಾಶ ಒದಗಿಸಿ ಪ್ಲೇಟೋ ಅರಿಸ್ಟಾಟಲ್‌ಗಿಂತ ಭಿನ್ನ ಎನಿಸಿದ್ದಾನೆ. ಅರಿಸ್ಟಾಟಲ್ ಸ್ತ್ರೀಯರಿಗೆ ಎಲ್ಲೂ ಶಿಕ್ಷಣದ ಅವಕಾಶ ನೀಡಿಲ್ಲ. ಇವನು ಗುಲಾಮರ ವರ್ಗಕ್ಕೆ ಸ್ತ್ರೀಯನ್ನು ಸೇರಿಸಿದ್ದಾನೆ. ಆದುದರಿಂದ ಪ್ಲೇಟೋ ಔನತ್ಯವನ್ನು ಮೆರೆಯುತ್ತಾನೆ. ಪ್ಲೇಟೋನ ಶಿಕ್ಷಣವು ಜೀವನದ ಉದ್ದಕ್ಕೂ ನಡೆಯುವ ಕ್ರಮವಾಗಿದೆ. ವಯಸ್ಸು ಹೆಚ್ಚಿದಂತೆ ಕಲಿಯುವವರಲ್ಲಿ ಆಸಕ್ತಿ, ಉತ್ಸಾಹ ಇರುತ್ತದೆಯೇ ಎಂಬಪ್ರಶ್ನೆ ಬರುತ್ತದೆ. ರೈತರನ್ನು ಕಸುಬುದಾರರನ್ನು ಉದಾಸೀನ ಮಾಡಿದಂತೆ ಅನಿಸುತ್ತದೆ. ಪ್ಲೇಟೋನ ಶಿಕ್ಷಣದ ಗುರಿ ಕೇವಲ ತತ್ವಜ್ಞಾನಿ ಅರಸುಗಳನ್ನು ಉತ್ಪಾದಿಸುವುದೇ ಆಗಿದೆ. ಇದರಿಂದ ಪ್ಲೇಟೋನ ಶಿಕ್ಷಣ ಒಳ್ಳೆಯ ತತ್ವಜ್ಞಾನಿಗಳನ್ನು ಉತ್ಪಾದಿಸಬಹುದಷ್ಟೆ. ಸಮರ್ಥ ಆಡಳಿತಗಾರರು ಸಿಗುವರೆಂಬ ಭರವಸೆ ಅತ್ಯಂತ ಕಡಿಮೆ.

ಶಿಕ್ಷಣವನ್ನು ಒದಗಿಸಲು ಅವಶ್ಯಕವಾದ ಶಿಕ್ಷಕರ ಲಭ್ಯತೆಯ ಬಗ್ಗೆಯಾಗಲಿ, ಅವರಿಗಿರಬೇಕಾದ ಅರ್ಹತೆಗಳ ಬಗೆಗಾಗಲಿ ಪ್ಲೇಟೋ ತಿಳಿಸಿಲ್ಲ. ಇವನ ಶಿಕ್ಷಣಕ್ರಮ ಕಾಲ್ಪನಿಕವಾಗಿದ್ದು ಆದರ್ಶವಾಗಿ ಯೋಚಿಸಲು ಮಾತ್ರ ಸಾಧ್ಯವಿದೆ. ಪ್ರಾಯೋಗಿಕವಾಗಿ ಅಸಾಧ್ಯ ಎನಿಸುತ್ತದೆ. ಯಾಕೆಂದರೆ, ನೇಪಲ್ಸ್‌ನ ೨ನೇ ಡಯೂಸ್‌ನು ರಿಪಬ್ಲಿಕ್ ಕೃತಿಯನ್ನು ಓದಿ ಪ್ರೇರಿತನಾಗುತ್ತಾನೆ. ಪ್ಲೇಟೋನನ್ನು ತನ್ನ ರಾಜ್ಯಕ್ಕೆ ಆಹ್ವಾನಿಸಿ, ರಾಜಕುಮಾರರಿಗೆ ತತ್ವಜ್ಞಾನಿ ಅರಸುಗಳ ತರಬೇತಿ ಕೊಡಲು ಕೇಳಿಕೊಳ್ಳುತ್ತಾನೆ. ಇಲ್ಲಿ ಪ್ರಯೋಗ ನಡೆಸಿ ಸ್ವತಃ ಪ್ಲೇಟೋ ವಿಫಲನಾಗುತ್ತಾನೆ. ಸಿಸಿಲಿಯಲ್ಲೂ ಹೀಗೆ ಪ್ರಯೋಗ ನಡೆಸಿ ವಿಫಲನಾಗುತ್ತಾನೆ.

ಕ್ರಿಸ್ತಪೂರ್ವದ ಪ್ಲೇಟೋನ ವಿಚಾರಗಳನ್ನು ಸಮಕಾಲೀನತೆಯಲ್ಲಿಟ್ಟು ನೋಡಿದಾಗ, ಸಾಮ್ಯತೆಗಳನ್ನು ಭಿನ್ನತೆಗಳನ್ನು ಗುರುತಿಸಬಹುದು. ಕಡ್ಡಾಯ ಶಿಕ್ಷಣ, ಸಮಾನ ಶೈಕ್ಷಣಿಕ ಅವಕಾಶಗಳು, ರಾಜ್ಯದಿಂದ ನಿರ್ದೇಶಿಸಲ್ಪಟ್ಟ ವಿಷಯಗಳ ಕಲಿಕೆ, ರಾಜ್ಯದ ನಿಯಂತ್ರಣದಲ್ಲಿರುವ ಶಿಕ್ಷಣ ವ್ಯವಸ್ಥೆಯಲ್ಲಿ ಏಕರೂಪತೆ ಇದ್ದರೂ ಅಂತಿಮ ಗುರಿಯಲ್ಲಿ ವ್ಯತ್ಯಾಸವಿದೆ. ಸಾಕ್ರೆಟಿಸ್ ಮತ್ತು ಪ್ಲೇಟೋ ಹೇಳಿದ ಸದಾಚಾರವೇ ಜ್ಞಾನ (Virtue is Knlowledge) ಸಮಕಾಲೀನ ಭಾರತೀಯ ಆಡಳಿತ ವ್ಯವಸ್ಥೆಯಲ್ಲಿ ಬಹಳ ಪ್ರಸ್ತುತವೆನಿಸುತ್ತದೆ. ಆಡಳಿತ ರಂಗದಲ್ಲಿ ಆಡಳಿತಗಾರರಿಗೆ ಜ್ಞಾನ ಇದೆಯಾದರೂ, ಸದಾಚಾರದ ಕೊರತೆ ಇದೆ. ಪರಿಣಾಮ ನೈತಿಕತೆಯ ಅಧಃಪತನ. ಭ್ರಷ್ಟಚಾರ ಅತ್ಯಂತ ಸಹಜವಾದ ರಾಜಕೀಯ ಮೌಲ್ಯವಾಗಿದೆ. ಆದುದರಿಂದ ನಮ್ಮ ರಾಜಕೀಯ ಆಡಳಿತಗಾರರು ಜ್ಞಾನದ ಜೊತೆಗೆ ಸದಾಚಾರವನ್ನು ಬಹಳ ಮುಖ್ಯವಾಗಿ ಅಳವಡಿಸಿಕೊಳ್ಳಬೇಕಿದೆ.

"ಮಾಟಕೂಟ" ಎಂಬ ಮಾತು ಕೇಳಲಾಗದು, ಶಿವಾ ಶಿವಾ! ನಿಮ್ಮ ಭಕ್ತರಿಗೆ "ಮಾಡಿದೆ" ನೆನ್ನದಿರೆಂದು ಶ್ರೀ ಗುರುಲಿಂಗವು ಕೃಪೆಯ ಮಾಡಿದ ಕಾರಣ, ಅಲ್ಲಿ ಮಾಡುವವರೂ ಮಾಡಿಸಿಕೊಂಬವರೂ ನೀವೇ ಕೂಡಲಸಂಗಮದೇವಾ.

ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು, ಮರ್ಮವನರಿಯದ ಮಾಟ ಸುಯಿದಾನದ ಕೇಡು! ಬಂದ ಸಮಯೋಚಿತವನರಿಯದಿದ್ದರೆ ನಿಂದಿರಲೊಲ್ಲ ಕೂಡಲಸಂಗಮದೇವಾ.

—ಶ್ರೀ ಬಸವೇಶ್ವರ

ವರೆಗೆ 82,14,000 ಮಕ್ಕಳ ದಾಖಲಾತಿ ಮತ್ತು 9000 ಶಾಲಾ ಕೊಠಡಿಗಳ ನಿರ್ಮಾಣ. 1 ಲಕ್ಷ ಮಕ್ಕಳಿಗೆ ಉಚಿತ ಶಾಲಾ ಬ್ಯಾಗ್ ಹಾಗೂ 52 ಲಕ್ಷ ಮಕ್ಕಳಿಗೆ ಉಚಿತ ಪಠ್ಯ ಪುಸ್ತಕಗಳ ಹಂಚಿಕೆ. **ವಸತಿ :-** 1996-97 ರ ಅವಧಿಯಲ್ಲಿ ವಸತಿ-ಹೀನರಿಗೆ ಆಶ್ರಯ. ಇಂದಿರಾ ಅವಾಜ್ ಮತ್ತು ರೋಜಗಾರ್ ಡಾ|| ಅಂಬೇಡ್ಕರ್ ವಸತಿ ಯೋಜನೆಗಳಡಿ ಹಂಚಿಕೆಯಾದ ಮನೆಗಳ ಸಂಖ್ಯೆ 1993-95 ರಲ್ಲಿ ಹಂಚಿಕೆಯಾದ ಮನೆಗಳ ಸಂಖ್ಯೆಗಿಂತ ದ್ವಿಗುಣ.

**ಸಮಾಜ ಕಲ್ಯಾಣ :-** ಪರಿಶಿಷ್ಟ ಜಾತಿ, ವರ್ಗದವರೇ ಮುಂತಾದ ಸಮಾಜದ ದುರ್ಬಲ ವರ್ಗದವರ ಜೀವನ ಮಟ್ಟ ಉತ್ತಮಗೊಳಿಸುವುದು ಸರ್ಕಾರದ ಆದ್ಯಧ್ಯೇಯಗಳಲ್ಲೊಂದು. ವಿಶೇಷ ಘಟಕ ಯೋಜನೆ ಹಾಗೂ ಗಿರಿಜನ ಉಪಯೋಜನೆಯಡಿ 1996-97 ರಲ್ಲಿ ರೂ. 104.12 ಕೋಟಿ ವೆಚ್ಚ. 1997-98 ರಲ್ಲಿ ವಿವಿಧ ಕಾರ್ಯಕ್ರಮಗಳಿಗಾಗಿ ರೂ. 190.90 ಕೋಟಿ ಮೀಸಲು. ನವಚೇತನ ಕಾರ್ಯಕ್ರಮದಡಿ 5000 ವಿದ್ಯಾವಂತ ನಿರುದ್ಯೋಗಿಗಳಿಗೆ ತರಬೇತಿ.

**ವಿದ್ಯುಚ್ಛಕ್ತಿ :-** ವಿದ್ಯುತ್ ಕೊರತೆ ನೀಗಲು ಹೊಸ ಶಾಖೋತ್ಪನ್ನ ವಿದ್ಯುತ್ ಸ್ಥಾವರಗಳ ಆರಂಭಕ್ಕೆ ಕ್ರಮ. ರಾಯಚೂರು ಶಾಖೋತ್ಪನ್ನ ವಿದ್ಯುತ್ ಕೇಂದ್ರದ 5 ಮತ್ತು 6 ನೇ ಘಟಕಗಳನ್ನು ಪ್ರಾರಂಭಿಸಲು ವಿವಿಧ ಹಣಕಾಸು ಸಂಸ್ಥೆಗಳಿಂದ ಹಾಗೂ ಸಾರ್ವಜನಿಕ ಸಂಸ್ಥೆಗಳಿಂದ ರೂ. 1545 ಕೋಟಿ ಸಂಗ್ರಹಕ್ಕೆ ಕರ್ನಾಟಕ ವಿದ್ಯುತ್ ನಿಗಮದ ಉಪಕ್ರಮ.

**ಕುಡಿಯುವ ನೀರು :-** ಗ್ರಾಮೀಣ ಪ್ರದೇಶಗಳಲ್ಲಿ ಕುಡಿಯುವ ನೀರು ಸರಬರಾಜಿಗೆ ಪ್ರಥಮಾದ್ಯತೆ. ಮುಂದಿನ 3 ವರ್ಷಗಳ ಅವಧಿಯಲ್ಲಿ ರಾಜ್ಯದ ಎಲ್ಲಾ ಗ್ರಾಮಗಳಿಗೂ ಕುಡಿಯುವ ನೀರು ಸರಬರಾಜು ಮಾಡುವ ಸಮಗ್ರ ಕಾರ್ಯಕ್ರಮಕ್ಕಾಗಿ 900 ಕೋಟಿ ಮೀಸಲು. **ಪರಿಕರ ಸಾಧನಗಳ ಅಭಿವೃದ್ಧಿ :-** ರಸ್ತೆಗಳ ದುರಸ್ತಿಗಾಗಿ ರೂ. 40 ಕೋಟಿ ಹೆಚ್ಚುವರಿ ಮೊತ್ತ, ರಸ್ತೆ ಜಾಲದ ಅಭಿವೃದ್ಧಿಗಾಗಿ ಹಾಗೂ ಸುಧಾರಣೆಗಾಗಿ ರಸ್ತೆ ನಿಧಿ ಸ್ಥಾಪನೆ. ಇಷ್ಟೇ ಅಲ್ಲ.

ಆಡಳಿತ ಯಂತ್ರವನ್ನು ಚುರುಕುಗೊಳಿಸಲು ಹಾಗೂ ಸರ್ಕಾರವನ್ನು ಜನರ ಸಮೀಪಕ್ಕೊಯ್ಯಲು ಮತ್ತಷ್ಟು ಅವಕಾಶ ಮಾಡಿಕೊಡಲು 7 ಹೊಸ ಜಿಲ್ಲೆಗಳ ಉದಯ. ಬೀದಿ ಮಕ್ಕಳು, ಚಿಂದಿ ಆಯುವ ಮಕ್ಕಳುಗಳು ಹಾಗೂ ಬಾಲಕಾರ್ಮಿಕರ ಕಲ್ಯಾಣಕ್ಕಾಗಿ ಯೋಜನೆಗಳು. ಮನೋವಿಕಲ ಮಕ್ಕಳಿಗಾಗಿ ಬಾಲಮಂದಿರಗಳು. ವೆಚ್ಚಗಳನ್ನು ತಗ್ಗಿಸಲು ಹಾಗೂ ಕಾರ್ಯಕಲಾಪಗಳಲ್ಲಿ ಅವ್ಯವಸ್ಥೆಯನ್ನು ಕಡಿಮೆ ಮಾಡಲು ವಿವೇಚನಾ ಪೂರ್ಣ ವರ್ಗಾವಣೆ ನೀತಿ.

ಈ ಎಲ್ಲ ಕಾರ್ಯಕ್ರಮಗಳ ಯಶಸ್ವೀ ಸಾಧನೆಯಿಂದಾಗಿ ರಾಜ್ಯವು ನಡೆಯುತ್ತಿರುವ ಹಾದಿಯು ಪ್ರಗತಿ ಪಥದತ್ತ ಸಾಗಿದೆ.

**ಜನರಿಗೇ ಪ್ರಗತಿಯ ಫಲ : ಅದುವೇ ಸರ್ಕಾರದ ಛಲ.**

**ಕರ್ನಾಟಕ ವಾರ್ತೆ**

" SIDDAGANGA MONTHLY Reg. No. KRNQ - 9

## ಶ್ರೀ ಸಿದ್ಧಗಂಗಾ ಬಸವತತ್ವ ಪ್ರಯೋಗ ಶಾಲೆ
## ಶ್ರೀ ಶ್ರೀಗಳವರ ವಜ್ರ ಮಹೋತ್ಸವ ಸ್ಮಾರಕ ಸೌಧಗಳು



ನೂತನ ಮಹಾದಾಸೋಹ ಪ್ರಸಾದ ನಿಲಯ



ನೂತನ ಬೃಹತ್ ವಸತಿ ಮಂದಿರ

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ - 572 104.